विश्वमध्वमहापरिषत् ग्रन्थमाला-३०

श्रीमदानन्दतीर्थभगवत्पादाचार्यविरचितं

# षट्प्रश्नोपनिषद्भाष्यम्

त्रयोदशटीकाटिप्पणीभिः संवलितम्

विश्वमध्वमहापरिषत् ग्रन्थमाला - ३०

श्रीमदानन्दतीर्थभगवत्पादाचार्यविरचितं

# षट्प्रश्नोपनिषद्भाष्यम्

त्रयोदशटीकाटिप्पणीभिः संवलितम्

सम्पादकः

**विद्वान् वादिराजाचार्य करणम्**

प्रकाशनम्

**विश्वमध्वमहापरिषत्**

जयतीर्थ विद्यापीठम्, उत्तरादिमठः

बसवनगुडि, बेङ्गळूरु-५६० ००४.

# श्रीमदानन्दतीर्थभगवत्पादाचार्यविरचितं **षट्प्रश्नोपनिषद्भाष्यम्**

त्रयोदशटीकाटिप्पणीभिः संवलितम्

critically edited by Vidwan Vadirajacharya Karnam and published by Vishwa Madhwa Mahaparishat, Jayateertha Vidyapeetha, Uttaradi Mutt, Basavanagudi, Bangalore - 560 004.

Copies : 1000

First Edition : 2005

Pages : 34+238

Price : Rs. 100.00

Published by :
**VISHWA MADHWA MAHAPARISHAT**
Jayateertha Viyapeetha
Uttaradi Mutt
Shankarpuram, Basavanagudi
Bangalore - 560 004.

Typeset : Prahlad Deshpande

Printers : Rashmi Printers

॥ श्रीदिग्विजयरामो विजयते ॥

# अनुग्रहसन्देशः

महतीमुद्यतो हि, त्रयोदशलोक्यामूर्ध्नि विराजमानः जीवघनप्राणाधिष्ठानभूतः सत्यलोक इव त्रयोदशव्याख्यानोपरि विराजमाना जीवघनप्राणमाहात्म्य-प्रतिपादिका षट्पश्नोपनिषत् उत्तरादिमठेन विश्वमध्वमहापरिषदा च प्रकाश्यमाना राराजतेतमाम् । अस्माकं प्रियशिष्येण पं. वादिराजाचार्येण ग्रन्थस्यास्य बहूनि हस्तलिखितानि पुस्तकानि अवलोक्य, महता परिश्रमेण संशोध्य, सम्पादनं व्यधायि । एवमेव शताधिकाः ग्रन्थाः सम्पाद्येरन् लिख्येरंश्चानेनेति भगवन्तं प्रार्थयामहे ।

अस्या उपनिषदः कानिचिद् व्याख्यानपुस्तकानि अस्मत्स्वरूपोद्धारकैः श्रीमत्सत्यप्रमोदतीर्थश्रीचरणैः सङ्गृहीतानि तेषामेवानुग्रहेण लब्धानि ।

कानिचित् पुस्तकानि पं. व्यासनकेरे प्रभञ्जनाचार्यैः दत्तानि । एभिः प्राचीनग्रन्थसंरक्षणेन महती वेदव्यासमध्वाचार्यसेवा विधीयमाना अस्ति ।

व्यासतीर्थः अक्षरसंयोजनादिकं अतीव साधु कृतवान् ।

सर्वानेतान् श्रीमूलरामदिग्विजयरामवेदव्यासा ज्ञानादिदानेन समनुगृह्णन्त्विति सम्प्रार्थयामहे ।

श्रीमत्सत्यात्मतीर्थश्रीपादङ्गळु

श्री सत्यात्मतीर्थाः

उत्तरादिमठः

॥ ಶ್ರೀಶಃ ಶರಣಮ್ ॥

# ಪ್ರಕಾಶಕರ ಮಾತು

ಪ್ರಾತಃಸ್ಮರಣೀಯರಾದ ಶ್ರೀ 1008 ಶ್ರೀ ಸತ್ಯಪ್ರಮೋದ ತೀರ್ಥರ ಕರಕಮಲಸಂಜಾತರು ಶ್ರೀ 1008 ಶ್ರೀ ಸತ್ಯಾತ್ಮತೀರ್ಥರು. ಧರ್ಮವನ್ನು, ಮಧ್ವಮತವನ್ನು ವಿಶ್ವದಲ್ಲಿ ಪ್ರಚಾರ ಮಾಡಬೇಕೆಂಬ ಇವರ ದೀಕ್ಷೆ ಅದಮ್ಯವಾಗಿದೆ. ಈ ದೀಕ್ಷೆಯ ಪ್ರತಿರೂಪವಾಗಿ 'ವಿಶ್ವಮಧ್ವ ಮಹಾಪರಿಷತ್' ಜನ್ಮ ತಾಳಿದೆ.

ಈ ಸಂಸ್ಥೆಯ ಹಲವಾರು ಉದ್ದೇಶಗಳಲ್ಲಿ ಗ್ರಂಥಪ್ರಕಾಶನವೂ ಒಂದು. ಸಂಸ್ಕೃತ, ಕನ್ನಡ, ತೆಲುಗು, ಹಿಂದಿ, ಮರಾಠಿ, ತಮಿಳು ಹಾಗೂ ಆಂಗ್ಲ ಭಾಷೆಗಳಲ್ಲಿ ಈಗಾಗಲೇ ಅನೇಕ ಧಾರ್ಮಿಕ ಗ್ರಂಥಗಳು ಈ ಸಂಸ್ಥೆಯಿಂದ ಪ್ರಕಾಶಿತವಾಗಿದೆ.

ಪ್ರಕೃತ ಷಟ್ಪ್ರಶ್ನೋಪನಿಷದ್ಭಾಷ್ಯ ಹದಿಮೂರು ವ್ಯಾಖ್ಯಾನಗಳಿಂದ ಪ್ರಕಾಶಿತವಾಗುತ್ತಿರು-ವುದು ಪರಿಷತ್ತಿಗೆ ಹೆಮ್ಮೆಯ ವಿಷಯ.

ಇದನ್ನು ಸಂಪಾದನೆ ಮಾಡಿದ ಪಂ. ವಾದಿರಾಜಾಚಾರ್ಯ ಕರಣಂ ಇವರಿಗೆ,

ಗ್ರಂಥಪ್ರಕಾಶನಕ್ಕಾಗಿ ತಮ್ಮ ಸಂಗ್ರಹದಲ್ಲಿರುವ ಅಪೂರ್ವ ಹಸ್ತಪ್ರತಿಗಳನ್ನು ನೀಡಿದ ಡಾ|| ವ್ಯಾಸನಕೆರೆ ಪ್ರಭಂಜನಾಚಾಯರಿಗೆ ಹಾಗೂ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಿಗೆ,

ಅಕ್ಷರ ಜೋಡಣೆ ಮಾಡಿದ ಪ್ರಹ್ಲಾದ ಡಿ.ವಿ. ಮತ್ತು ಅಂದವಾದ ಮುದ್ರಣಕ್ಕಾಗಿ ರಶ್ಮಿ ಮುದ್ರಣಾಲಯದವರಿಗೂ ಇವರಿಗೆ,

ಪರಿಷತ್ತು ಆಭಾರಿಯಾಗಿದೆ.

ಇತಿ

ಪ್ರಧಾನ ಕಾರ್ಯದರ್ಶಿ
ವಿಶ್ವಮಧ್ವಮಹಾಪರಿಷತ್
ಬಸವನಗುಡಿ, ಬೆಂಗಳೂರು.

॥ ಶ್ರೀಶಃ ಶರಣಮ್ ॥

# ಮುನ್ನುಡಿ

ಕ್ಷರಾಕ್ಷರ ಪುರುಷೋತ್ತಮ ಪರಮಾತ್ಮ. ಜಗದ ಜನ್ಮಾದಿಗಳಿಗೆ ನಿಮಿತ್ತ ಕಾರಣ. ಇದರ ಅರಿವು ಮುಮುಕ್ಷುಗಳಿಗೆ ಅನಿವಾರ್ಯ.

ಆಗದವರ ಉಪದೇಶಗಳಿಂದ ಅದೋ, ಇದೋ ಎಂಬ ಗೊಂದಲಕ್ಕೆ ಎಷ್ಟೋ ಜನ ಸಿಕ್ಕಿಬಿದ್ದಿದ್ದಾರೆ.

ಆದರೆ ವಿಚಾರಪರರಾದ ಮಾನವರು ತತ್ತ್ವರಹಸ್ಯವನ್ನರಿಯಲು ದಿಟ್ಟವಾದ ಹೆಜ್ಜೆಯನ್ನಿಟ್ಟಿದ್ದಾರೆ. ತಮ್ಮ ಅಂತಃಸತ್ವದ ಪ್ರಭಾವದಿಂದ ಆ ರಹಸ್ಯವನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ.

ಅಲ್ಲದೆ ಅಜ್ಞಾನಿಗಳಿಗೆ ಒಗಟಾಗಿ ಉಳಿದ ಆ ತತ್ತ್ವಗಳನ್ನು ತಮ್ಮ ನಡೆನುಡಿಗಳಿಂದ ಬಿಡಿಸಿಟ್ಟಿದ್ದಾರೆ. ಮುಂದಿನ ಜನತೆಗೆ ದಾರಿದೀಪರಾಗಿದ್ದಾರೆ.

ಅಂತಹ ಮಹಾ ಅನುಭಾವಿಗಳಲ್ಲೊಬ್ಬರು ಪಿಪ್ಪಲಾದರು. ದ್ವಂದ್ವ ದುಃಖಗಳೆಂಬ ದಳ್ಳುರಿಗೆ ಅಶನವು ಆಜ್ಯವೆಂದು ಬಗೆದು ಅದನ್ನು ತ್ಯಜಿಸಿದವರು. ಉಪಜೀವನಕ್ಕಾಗಿ ಅನಿವಾರ್ಯವಾದಾಗ ಕೆಳಬಿದ್ದ ಕೆಲವು (ಪಿಪ್ಪಲ) ಅರಳಿ ಹಣ್ಣನ್ನೋ, ಎಲೆಯನ್ನೋ ತಿಂದು ಜೀವನಕುಸುಮವನ್ನರಳಿಸಿಕೊಂಡವರು. ಮಹಾವಿಜ್ಞಾನಿಗಳು.

ಇವರನ್ನು ಹುಡುಕಿಕೊಂಡು ಬಂದ ಆರು ಜನ ಋಷಿಗಳ ಆರು ಪ್ರಶ್ನೆಗಳಿಗೆ ಪಿಪ್ಪಲಾದರು ನೀಡಿದ ಪರಿಹಾರ ಈ ಉಪನಿಷತ್ತಿನಲ್ಲಿದೆ. ಅಂತೆಯೇ ಇದು ಷಟ್ಪ್ರಶ್ನೋಪನಿಷತ್ ಎಂದು ಪ್ರಸಿದ್ಧವಾಗಿದೆ.

ಪರಮಪುರುಷ ವಾಸುದೇವ ಈ ಉಪನಿಷತ್ಪ್ರತಿಪಾದ್ಯ. ಪರಮಪದವ ತಲುಪಿಸುವದೇ ಇದರ ಗುರಿ.

ಆದರೆ ಈ ಉಪನಿಷತ್ತಿನಲ್ಲಿಯ ತತ್ತ್ವಗಳನ್ನು ಸರಿಯಾಗಿ ತಿಳಿಯಲು ಅತೀವ ಅನಿವಾರ್ಯವಾಗಿ ಬೇಕಾದದ್ದು ಶ್ರೀಮನ್ಮಧ್ವಾಚಾರ್ಯರ ಭಾಷ್ಯ.

ಇಂತಹ ಭಾಷ್ಯ ಹದಿಮೂರು ಟೀಕಾ–ಟಿಪ್ಪಣಿಗಳೊಂದಿಗೆ ಈಗ ಸಿದ್ಧವಾಗಿದೆ.

ಇದಕ್ಕೆ ಟೀಕಾಕೃತ್ಪಾದರ ಟೀಕೆ.ಇದೆ ಎಂಬುದೇ ನಮ್ಮೆಲ್ಲರ ಅದೃಷ್ಟ. ಟೀಕಾರಾಯರ ವಾಕ್ಯಗಳಿಗೆ ಹಣೆಮಣಿದು ಅವುಗಳ ವ್ಯಾಖ್ಯಾನ ಮಾಡುವಲ್ಲಿ ಪ್ರಾಣವನ್ನೂ ಪಣವಾಗಿಟ್ಟ ಮಹಾಜ್ಞಾನಿಗಳ ತಂಡವೇ ಇದೆ. ಅದನ್ನು ಲೆಕ್ಕಿಸಲಾಗುವದಿಲ್ಲ. ಅವರಲ್ಲಿ ಪ್ರಮುಖರಾದವರು

ಶ್ರೀವ್ಯಾಸರಾಜರು, ಶ್ರೀವಾದಿರಾಜರು, ಶ್ರೀವಿದ್ಯಾಧೀಶರು, ಶ್ರೀರಾಘವೇಂದ್ರರು, ಶ್ರೀರಘೂತ್ತಮರು, ಶ್ರೀವೇದೇಶತೀರ್ಥರು.

ಯಾದವಾರ್ಯರು, ಶ್ರೀನಿವಾಸತೀರ್ಥರು ಮೊದಲಾದ ಮಹಾನುಭಾವರು ಸಹ ಈ ಸಾಲಿನಲ್ಲಿ ಅಗ್ರಗಣ್ಯರಾಗಿದ್ದಾರೆ.

ಅಲ್ಲದೇ ಟೀಕೆಯಲ್ಲಿಯ ದೋಷಗಳನ್ನು ಹುಡುಕಲು ತಲೆ ಕೊಡವಿಕೊಂಡು ಕಂಗಾಲಾಗಿ ಹೋದ ಧೀಮಂತರಿಗೂ ಕೊರತೆ ಇಲ್ಲ.

ಹೀಗೆ ವಿಚಾರಿಸಿದಲ್ಲಿ ಜಯತೀರ್ಥರ ಟೀಕೆಯ ಪರಿಶುದ್ಧಿಯ ಸ್ತರ ಎಷ್ಟೆಂಬುದು ನಮಗೆಲ್ಲ ತಿಳಿದು ಬರುತ್ತದೆ.

ಅಲ್ಲದೇ ದೇಶದೇಶಗಳನ್ನು ತಿರುಗಿ ಎಲ್ಲ ಗ್ರಂಥಗಳನ್ನು ನೋಡಿ ಪರಿಶುದ್ಧವಾದ ಪಾಠವನ್ನು ಒದಗಿಸಿಕೊಟ್ಟ ಇವರ ಸೂಕ್ಷ್ಮಪ್ರಜ್ಞೆ ಅನನ್ಯಸಾಧಾರಣವಾದದ್ದು.

ಪ್ರಕೃತ ಈ ಉಪನಿಷತ್ತಿನ ಒಂದನೇ ಪ್ರಶ್ನೆಯಲ್ಲಿಯ ಐದನೇ ಮಂತ್ರ. ವಿಶ್ವರೂಪಂ ಹರಿಣಂ ಎಂಬುದು. ಶಂಕರಾಚಾರ್ಯರ ಕಾಲದಿಂದಲೂ ಇದೇ ಪಾಠ ಪ್ರಚಲಿತವಾಗಿದೆ. ಆದರೆ ಟೀಕಾರಾಯರು 'ವಿಶ್ವರೂಪಂ ಕರಿಣಂ' ಎಂಬ ಶುದ್ಧವಾದ ಪಾಠವನ್ನು ಸಂಗ್ರಹಿಸಿದ್ದಾರೆ. ಅಕ್ಷ್ಣೋಪನಿಷತ್ತಿನಲ್ಲೂ 'ವಿಶ್ವರೂಪಂ ಘೃಣಿನಂ' ಎಂಬ ಪಾಠಭೇದದಿಂದ ಈ ಮಂತ್ರವು ಉಪಲಬ್ಧವಾಗಿದೆ. ಇದನ್ನು ಸರಿಯಾಗಿ ತಿಳಿಯುವ ಅಗತ್ಯ ಎಲ್ಲರಿಗೂ ಇದೆ.

ಅಲ್ಲದೇ 'ಏವಂ ಜಾನನ್ ವಿಮುಚ್ಯತೇ' 'ಜ್ಞಾನಂ ಚತುರ್ಮುಖಾತ್ ಪ್ರಾಪ್ಯ' ಎಂಬ ಭಾಷ್ಯಕ್ಕೆ ಪರಿಪೂರ್ಣ ನ್ಯಾಯವಾಗುವಂತೆ ನೀಡಿದ ವಿವರಣೆ ಅತ್ಯದ್ಭುತವಾಗಿದೆ.

ಹೀಗೆ ಸರ್ವಮೂಲಗಳಿಗೆ ಪರಿಪೂರ್ಣವಾಗಿ ನ್ಯಾಯ ಮಾಡಿದ ಟೀಕಾಕಾರರು ಇವರೊಬ್ಬರೇ ಎಂಬುದು ದಾರ್ಶನಿಕರಿಗೆ ಸಮ್ಮತವಾದದ್ದು.

ಇಂತಹ ಷಟ್ಪ್ರಶ್ನಭಾಷ್ಯ ಟೀಕೆಗೆ ಎಂಟು ಟಿಪ್ಪಣಿಗಳು ಇಲ್ಲಿವೆ.

1. ವಾದಿರಾಜರ ಪ್ರಕಾಶಿಕಾ
2. ಎರಡು ಪ್ರಶ್ನಗಳಿಗೆ ಸತ್ಯಪ್ರಜ್ಞರ ಟಿಪ್ಪಣಿ
3. ಶ್ರೀನಿವಾಸತೀರ್ಥೀಯ
4. ಛಲಾರಿ ನಾರಾಯಣಾಚಾರ್ಯರ ಟಿಪ್ಪಣಿ
5. ತಾಮ್ರಪರ್ಣೀ ಶ್ರೀನಿವಾಸಾಚಾರ್ಯರ ಟಿಪ್ಪಣಿ
6. ಮಂಕಾಲಿ ಧರ್ಮರಾಜರ ಟಿಪ್ಪಣಿ
7. ಅನಂತಭಟ್ಟೀಯ ಟಿಪ್ಪಣಿ

8. ಗೂಢಕರ್ತೃಕ ಟಿಪ್ಪಣಿ

ಅಲ್ಲದೇ ಶ್ರೀನಾರಾಯಣ ಪಂಡಿತಾಚಾರ್ಯರ ಮಕ್ಕಳು, ಶಿಷ್ಯರೂ ಆದ ವಾಮನ ಪಂಡಿತರ ಟೀಕೆಯೂ ಇಲ್ಲಿದೆ. ಅಪೂರ್ವವಾದ ವಿಷಯಗಳ ಸ್ಪಷ್ಟವಾದ ಪ್ರತಿಪಾದನೆ ಈ ಟೀಕೆಯಲ್ಲಿ ಕಾಣಬಹುದು.

ಇದೇ ಉಪನಿಷತ್ತಿನಲ್ಲಿ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು ತಮ್ಮ ವ್ಯಾಖ್ಯಾನದಲ್ಲಿ 'ತದುಕ್ತಂ ಪ್ರಾಚೀನಟೀಕಾಕಾರೈಃ ವರದತೀರ್ಥೈಃ' ಎಂದು ಉದಾಹರಿಸುವ ವರದತೀರ್ಥರ ವ್ಯಾಖ್ಯಾನಕ್ಕೂ ವಾಮನ ಪಂಡಿತರ ವ್ಯಾಖ್ಯಾನಕ್ಕೂ ಸಾಕಷ್ಟು ಸಾಮ್ಯವಿದೆ.

ಇದಲ್ಲದೇ ಶ್ರೀರಾಘವೇಂದ್ರತೀರ್ಥರದ್ದು ಎಂದು ಹೇಳಲಾದ ಖಂಡಾರ್ಥ, ಶ್ರೀವಿದ್ಯಾ-ಧೀಶರ ಶಿಷ್ಯರಾದ ನರಸಿಂಹ ಯತಿಗಳ ಖಂಡಾರ್ಥ ಹಾಗೂ ಉದಯಗಿರಿ ಕೇಶವಾಚಾರ್ಯರ ಖಂಡಾರ್ಥವೂ ಈಗ ಮುದ್ರಿತವಾಗಿದೆ.

ಹೀಗೆ ಒಟ್ಟು ಎರಡು ಟೀಕಾ, ಎಂಟು ಟಿಪ್ಪಣಿ, ಮೂರು ಖಂಡಾರ್ಥಗಳನ್ನೊಳಗೊಂಡ ಈ ಗ್ರಂಥವು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶಿತವಾಗಿದೆ.

ಈ ಪ್ರಕಾಶನದ ಜೀವಾಳ ಪ್ರಾತಃಸ್ಮರಣೀಯರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು.

ಪ್ರಕೃತಿಯ ವಿಕೋಪಗಳನ್ನು ಸಹಿಸಿಕೊಂಡು ಕಂಡಕಂಡಲ್ಲಿ ಅಲೆದು ಅತ್ಯಮೂಲ್ಯವಾದ ಗ್ರಂಥರಾಶಿಯನ್ನು ಸಂಗ್ರಹ ಮಾಡಿದ ಮಹಾಜ್ಞಾನಿಗಳಿವರು. ಇವರ ಸಂಗ್ರಹದಲ್ಲಿಯ ಟೀಕಾ, ನರಸಿಂಹಯತಿಗಳ ಖಂಡಾರ್ಥ, ತಾಮ್ರಪರ್ಣೀಯ ಟಿಪ್ಪಣಿಯ ನಾಲ್ಕು ಹಸ್ತಪ್ರತಿಗಳು, ಉದಯಗಿರಿ ಕೇಶವಾಚಾರ್ಯರ ಖಂಡಾರ್ಥಗಳ ಹಸ್ತಪ್ರತಿಗಳನ್ನು ಪ್ರಕೃತ ಮುದ್ರಣಕ್ಕೆ ಬಳಸಿಕೊಂಡಿದ್ದೇನೆ. ಇಂತಹ ಭೂಮಾಪುರುಷರಿಗೆ ಶ್ರದ್ಧಾಭಕ್ತಿಪೂರ್ವಕ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳು.

ನನ್ನ ಅನಂತ ಜನ್ಮಗಳ ಸುಕೃತಪರಿಪಾಕದಿಂದ ಲಬ್ಧರಾಗಿ ಸದಾ ಪ್ರೀತಿ, ವಾತ್ಸಲ್ಯಗಳ ಮಹಾಪೂರವನ್ನು ಹರಿಸುವ ಗುರುಗಳು ಶ್ರೀ 1008 ಶ್ರೀ ಸತ್ಯಾತ್ಮತೀರ್ಥರು. ಏನೂ ಅರಿಯದ ನನಗೆ ಮಧ್ವಸಿದ್ಧಾಂತವನ್ನು ಉಪದೇಶ ಮಾಡಿ, ಅದರಲ್ಲಿ ಆದರ ಮೂಡಿಸಿ ಸ್ವರೂಪೋದ್ಧಾರಕರಾಗಿದ್ದಾರೆ.

ಅನವರತ ಪಾಠಪ್ರವಚನಗಳಲ್ಲಿ ನಿರತರಾಗಿದ್ದರೂ ಸಂಶೋಧನಕಾರ್ಯದಲ್ಲಿ ಎಲ್ಲ ರೀತಿಯಲ್ಲಿ ಬೆಂಬಲವಾಗಿದ್ದು ಈ ಪ್ರಯತ್ನಕ್ಕೆ ಆಶೀರ್ವಚನವನ್ನು ನೀಡಿದ ಗುರುಗಳ ಸನ್ನಿಧಿಗೆ ಅನಂತ ಜನ್ಮಗಳ ಭಕ್ತಿಶ್ರದ್ಧಾಯುತ ಶಿರಸಾಷ್ಟಾಂಗ ಪ್ರಣಾಮಗಳು.

ಗ್ರಂಥಸಂಶೋಧನೆ ಮಾಡುವಾಗ ಬಂದ ಅನೇಕ ತೊಡರುಗಳನ್ನು ತೊಲಗಿಸಿ ಸರ್ವತೋಮುಖವಾದ ಸಹಕಾರ ಹಾಗೂ ಪ್ರೋತ್ಸಾಹಗಳನ್ನು ನೀಡಿದ, ಬಿಡುವಿಲ್ಲದೇ ಪಾಠ-ಪ್ರವಚನ- ಲೇಖನಗಳಲ್ಲಿ ನಿರತರಾದರೂ ತಮ್ಮ ಅಮೂಲ್ಯ ಸಲಹೆಗಳಿಂದ ನಮ್ಮ ಏಳಿಗೆಗೆ ಕಾರಣರಾದ ಶ್ರೀ ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ ಪಂ. ಪೂ. ಆಚಾರ್ಯರವರಿಗೆ (ಶ್ರೀ ರಂಗಾಚಾರ್ಯ ಗುತ್ತಲ) ಸಾಷ್ಟಾಂಗ ಪ್ರಣಾಮಗಳು.

'ಅಧ್ಯಯನ ಮಾಡು, ಜಪ ಮಾಡು' ಎಂದು ಬೇಸರವಿಲ್ಲದೇ ಪದೇಪದೇ ಎಚ್ಚರ ನೀಡಿ ನನ್ನ ಅಭಿವೃದ್ಧಿಗೆ ಕಾರಣರಾದ ಗುರುಗಳಾದ ಸತ್ಯಧ್ಯಾನ ವಿದ್ಯಾಪೀಠದ ಕುಲಪತಿಗಳಾದ ಪಂ.ಪೂ. ಆಚಾರ್ಯರಿಗೆ (ವಿದ್ಯಾಸಿಂಹಾಚಾರ್ಯ ಮಾಹುಲಿ) ಸಾಷ್ಟಾಂಗ ನಮಸ್ಕಾರಗಳು.

ಎಲ್ಲ ಪ್ರಸಂಗದಲ್ಲಿಯೂ ಅಮೂಲ್ಯವಾದ ಸಲಹೆ ನೀಡಿದ ಪಂ. ವಿದ್ಯಾಧೀಶಾಚಾರ್ಯ ಗುತ್ತಲ ಇವರಿಗೆ ನನ್ನ ನಮನಗಳು.

ನಾವು ಕೇಳಿದಾಗೆಲ್ಲ ಇಲ್ಲವೆನ್ನದೆ ತಮ್ಮಲ್ಲಿಯ ಅಪೂರ್ವ ವ್ಯಾಖ್ಯಾನಗಳನ್ನು ನೀಡುತ್ತಿರುವ, ಪ್ರಕೃತ ವಾಮನ ಪಂಡಿತರ ಟೀಕಾ, ಶ್ರೀನಿವಾಸತೀರ್ಥೀಯ, ಛಲಾರಿ ಟಿಪ್ಪಣಿ ಹಾಗೂ ನರಸಿಂಹ ಯತಿಗಳ ಖಂಡಾರ್ಥದ ಎರಡು ಹಸ್ತಪ್ರತಿಗಳನ್ನು ನೀಡಿ ಪ್ರೋತ್ಸಾಹಿಸುತ್ತಿರುವ ಡಾ|| ಪ್ರಭಂಜನಾಚಾರ್ಯ ವ್ಯಾಸನಕೆರೆ ಇವರಿಗೆ ಕೃತಜ್ಞತಾಪೂರ್ವಕ ವಂದನೆಗಳು.

ಶ್ರೀನಿವಾಸತೀರ್ಥರ ಟಿಪ್ಪಣಿಯ ಹಸ್ತಪ್ರತಿಯನ್ನು ಒದಗಿಸಿ ಉಪಕಾರ ಮಾಡಿದ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯ ನಿರ್ದೇಶಕರಿಗೆ ಅನೇಕ ಧನ್ಯವಾದಗಳು.

ಉತ್ತಮವಾಗಿ ಅಕ್ಷರಸಂಯೋಜನೆಯನ್ನು ಮಾಡಿದ ಶ್ರೀ ಡಿ.ವಿ. ಪ್ರಹ್ಲಾದ ಇವರಿಗೆ ಕೃತಜ್ಞತಾಪೂರ್ವಕ ಅಭಿನಂದನೆಗಳು.

ಇದರಲ್ಲಿರಬಹುದಾದ ತಪ್ಪುಗಳನ್ನು ಸಹಿಸಿ ನನ್ನನ್ನು ಹರಿಸಬೇಕೆಂದು ಕೋರುವೆ.

ಇತಿ

ಶ್ರೀಶಶರಣಚರಣರೇಣು

**ವಾದಿರಾಜ ಕರಣಮ್**

॥ ಶ್ರೀಗುರುಭ್ಯೋ ನಮಃ ॥

॥ ಪರಮಗುರುಭ್ಯೋ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ॥

॥ ಶ್ರೀಪಿಪ್ಪಲಾದಿಋಷಿಭ್ಯೋ ನಮಃ ॥

# ಷಟ್‌ಪ್ರಶ್ನೋಪನಿಷತ್ ಸಾರ

## ಪ್ರಥಮ ಪ್ರಶ್ನೆ

ಸಕಲ ಸಂಕ್ಲೇಶಗಳಿಗೆ ಸಾಗರ ಸಂಸಾರ. ಆರೇ ತೆರೆಗಳು ಅಲ್ಲಿ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂದು. ನಿರಂತರ ಮೀರಿ ಬರುತ್ತಿರುವ ಈ ಆರು ತೆರೆಗಳನ್ನೇ ಪರಿಹರಿಸಿಕೊಳ್ಳಲು ಯಾರಿಂದಲೂ ಆಗದು. ಇದ ನಿವಾರಿಸಿ ಸಂಸಾರ ಸಾಗರವ ದಾಟಿಸುವ ಅಂಬಿಗ ನಾರಾಯಣ. ಈ ಹರಿಯ ಅರಿವೇ ಸಂಸಾರಸಾಗರದ ತೀರ ತೋರಿಸುವ ತರಣಿ(ದೋಣಿ). ಈ ತತ್ತ್ವಜ್ಞಾನದ ಸಂಪ್ರಾಪ್ತಿ ವೇದವೇದಾಂತಗಳಿಂದ. ಇಂತಹ ಉಪನಿಷತ್ತುಗಳಲ್ಲೊಂದು ಷಟ್ಪ್ರಶ್ನೋಪನಿಷತ್.

ಉಪನಿಷದಭಿಮಾನಿದೇವತೆಗಳಿಗೆ ನಮ್ಮನ್ನುದ್ಧರಿಸುವ ತವಕವೇನೋ ಇದೆ. ಆದರೆ ಅವರಿಗೊಂದು ಸಹಕಾರಿ ಬೇಕು. ಉತ್ತಮವಾದ ಯುಕ್ತಿಗಳಿಂದ ಯುಕ್ತವಾದ ಭಾಷ್ಯವೇ ಸಹಕಾರಿಯಾಗಬೇಕು. ಆಗ ಸುಜನರಿಗೆ ತತ್ತ್ವಜ್ಞಾನ ನೀಡಲು ಸಮರ್ಥರಾಗುತ್ತಾರೆ. ಅದಕ್ಕಾಗಿಯೇ ಶ್ರೀಮನ್ಮಧ್ವಾಚಾರ್ಯರು ಭಾಷ್ಯದ ರಚನೆ ಮಾಡಿದ್ದಾರೆ.

ಮೊದಲು ''ನಮೋ ಭಗವತೇ ....'' ಎಂದು ಉಪನಿಷತ್ಪ್ರತಿಪಾದ್ಯನಾದ ವಾಸುದೇವನನ್ನು ಸ್ಮರಿಸುತ್ತಾ ಮಂಗಳಾಚರಣೆ ಮಾಡಿದ್ದಾರೆ.

ಪ್ರಾರಬ್ಧವಾದ ಗ್ರಂಥ ನಿರ್ವಿಘ್ನವಾಗಿ ಸಮಾಪ್ತಿಗೊಳ್ಳಬೇಕು. ಈ ಉದ್ದೇಶದಿಂದ ಮಂಗಳಾಚರಣೆ ಮಾಡಬೇಕು. ಆದರೆ ಆಖಣಾಶ್ಮಸಮರಾದ, ವಾಯ್ವವತಾರರಾದ ಶ್ರೀಮನ್ಮಧ್ವಾಚಾರ್ಯರಿಗೆ ಯಾರಿಂದಲೂ ಯಾವ ತರಹದ ತೊಡರುಗಳೂ ಇಲ್ಲ. ಆದರೂ ಅಧ್ಯಯನ ಮಾಡುವವರಿಗೆ ಯಾವ ತರಹದ ವಿಘ್ನ ಬಾರದಿರಲಿ ಎಂಬ ಉದ್ದೇಶ ಅಥವಾ ಶಿಷ್ಯರಿಗೆ ಹೀಗೆ ಮಾಡಬೇಕೆಂದು ಕಲಿಸುವ ಉದ್ದೇಶ ಈ ಮಂಗಳಾಚರಣೆಗೆ ಹಿನ್ನೆಲೆಯಾಗಿದೆ.

ನಮೋ ಭಗವತೇ ತಸ್ಮೈ ಪ್ರಾಣಾದಿಪ್ರಭವಿಷ್ಣವೇ ।
ಅಮಂದಾನಂದಸಾಂದ್ರಾಯ ವಾಸುದೇವಾಯ ವೇಧಸೇ ॥

ಪ್ರಾಣ, ಭಾರತಿ ಮೊದಲಾದವರನ್ನು ಹುಟ್ಟಿಸಿದವನು ಪರಮಾತ್ಮ. ಸುಖವನ್ನು ಪಡೆಯುವದಕ್ಕಾಗಿಯೋ, ಪಡೆದ ಸುಖವನ್ನು ಕಾಪಾಡಿಕೊಳ್ಳುವದಕ್ಕಾಗಿಯೋ ಅವನು

ಯಾವ ಕೆಲಸವನ್ನೂ ಮಾಡುವವನಲ್ಲ. ಕೊನೆ ಇಲ್ಲದ ಕಾಲದುದ್ದಕ್ಕೂ ಸುಖಪರಿಪೂರ್ಣನವನು. ಕಾರಣ ಯಾವುದಕ್ಕಾಗಿಯೂ ಪರಮಾತ್ಮ ಏನೂ ಮಾಡಬೇಕಿಲ್ಲ. ಅಂದಮಾತ್ರಕ್ಕೆ ಏನೂ ಮಾಡದೇ ಸುಮ್ಮನೆ ಕೂಡುವವನೂ ಅಲ್ಲ. ಮಾಡುವದು ಅವನ ಸ್ವಭಾವ. ಸ್ವಭಾವಕ್ಕೆ ಪ್ರಯೋಜನದ ಅಪೇಕ್ಷೆ ಇಲ್ಲ. ಹೀಗಾಗಿ ಎಲ್ಲವನ್ನು ಮಾಡುವವನವನೇ. ಇಂತಹ ಸರ್ವಜ್ಞನಾದ ವಾಸುದೇವನಿಗೆ ನಮಸ್ಕಾರ.

ಹೀಗೆ ಮಂಗಳಾಚರಣೆಯನ್ನು ಮಾಡಿ ಉಪನಿಷತ್ತಿಗೆ ಭಾಷ್ಯವನ್ನು ರಚಿಸಿದ್ದಾರೆ. ಈ ಭಾಷ್ಯ ಬರೆಯುವಾಗ ಪರರ ವ್ಯಾಖ್ಯಾನಗಳನ್ನು ಪ್ರತ್ಯೇಕವಾಗಿ ನಿರಾಕರಿಸಿಲ್ಲ. ಪರಮಾತ್ಮ ರಚಿಸಿದ ಗ್ರಂಥದಲ್ಲಿಯ ಪ್ರಮಾಣಗಳ ಆಧಾರದಿಂದಲೇ ಯಾವ ಮಂತ್ರಕ್ಕೆ ಹೇಗೆ ವ್ಯಾಖ್ಯಾನ ಮಾಡಬೇಕೆಂದು ತಿಳಿಸಿದ್ದಾರೆ. ಹೀಗೆ ಆ ಪ್ರಮಾಣಗಳಿಗೆ ವಿರುದ್ಧವಾದುದೆಲ್ಲವೂ ತಪ್ಪು ಎಂದು ತಿಳಿಸಿದ್ದಾರೆ. ಇಂತಹ ಭಾಷ್ಯದ ಆಶ್ರಯದಲ್ಲಿ ಉಪನಿಷತ್ತಿನ ಆಶಯವನ್ನು ಸಂಗ್ರಹವಾಗಿ ತಿಳಿಯೋಣ.

ಮೊದಲಿಗೆ ಉಪನಿಷತ್ತು ನೇರವಾಗಿ ತತ್ತ್ವವನ್ನು ಪ್ರತಿಪಾದಿಸುವದಿಲ್ಲ. ಹಾಗೆ ತಿಳಿಸಿದರೆ ನಮಗಾರಿಗೂ ಅದರ ಬಗ್ಗೆ ಆದರ ಬರುವದಿಲ್ಲ. ಕಾರಣ ನಮ್ಮಲ್ಲಿ ಆದರ ಹುಟ್ಟಿಸಲು ನಮಗೊಂದು ಕಥೆಯನ್ನು ಹೇಳುತ್ತದೆ. ಆ ಕಥೆ ಕೇಳಿದಾಗ ನಮ್ಮಲ್ಲಿಯ ಭಾವನೆಗಳು ಹೀಗೆ ಬದಲಾಗುತ್ತವೆ.

''ಪ್ರಶ್ನೆಗಳನ್ನು ಕೇಳಿದವರು ಮಹಾಜ್ಞಾನಿಗಳು. ಪರಬ್ರಹ್ಮನನ್ನರಿತವರು. ಮಹಾತಪಸ್ಸಂಪನ್ನರು. ಇಂತಹ ಋಷಿಗಳೇ ಈ ತತ್ತ್ವವನ್ನರಿಯುವದಕ್ಕಾಗಿ ಇಷ್ಟೆಲ್ಲ ಕಷ್ಟವನ್ನು ಸಹಿಸಲು ಸಿದ್ಧರಾಗಿದ್ದಾರೆ. ಹಾಗಾದರೇ ಈ ತತ್ತ್ವ ಉತ್ತಮವಾದದ್ದು. ಸಂದೇಹವಿಲ್ಲ. ಇದನ್ನು ತಿಳಿಯಲೇ ಬೇಕು. ಇಲ್ಲಿ ಹೇಳಿದ್ದೆಲ್ಲವೂ ಸತ್ಯವಾಗಿರಲು ಸಾಕು. ಇದನ್ನರಿಯುವುದರಿಂದ ಶಾಶ್ವತವಾದ ಪ್ರಯೋಜನವಿರಲೇಬೇಕು.'' ಎಂಬುದಾಗಿ ನಮ್ಮಲ್ಲಿ ಶ್ರದ್ಧೆ ಮೂಡುತ್ತದೆ. ಈ ಉದ್ದೇಶದಿಂದ ಉಪನಿಷತ್ತು ಈ ಆಖ್ಯಾಯಿಕೆಯನ್ನು ಮೊದಲು ಹೇಳುತ್ತಿದೆ. ಅದೇನೆಂದರೇ– ಆರು ಜನ ವಿದ್ವಾಂಸರು. ಹರಿಯನ್ನರಿತವರು. ವಿಹಿತಕರ್ಮಗಳಲ್ಲಿ ನಿರತರು. ಅವರ ನಾಮಗಳಿನಿತಾಗಿವೆ. 1. ಸುಕೇಶಾ, ಭರದ್ವಾಜನ ಮಗನಿವನು. 2. ಸತ್ಯಕಾಮ, ಇವನು ಶಿಬಿಯ ಮಗ. 3. ಸೌರ್ಯಾಯಣೀ, ಇವನು ಸೌರ್ಯನ ಮಗ, ಸೂರ್ಯನ ಮೊಮ್ಮಗ ಗರ್ಗಗೋತ್ರದವನು. 4. ಕೌಸಲ್ಯ, ಅಶ್ವಲಾಯನನ ಮಗನಾದ ಇವನದ್ದು ಕೋಸಲದೇಶ. 5. ವೈದರ್ಭಿ, ಭೃಗುವಿನ ಮಗ ವಿದರ್ಭದೇಶವಾಸಿ. 6, ಕಬಂಧೀ, ಇವನು ಕತ್ಯನ ಮಗ.

ಈ ಆರು ಜನರೂ ಉದ್ದಾಮ ವಿದ್ವಾಂಸರು. ಆದರೂ ವಾಸುದೇವನನ್ನರಿಯುವ ಆಸೆ. ಬಯಕೆ ಬಲವಾಯಿತು. ಬಗೆಹರಿಯುವದು ಹೇಗೆ ಎಂದು ವಿಚಾರಿಸಿದರು. ನಾವು ಕೇಳುವ

ಎಲ್ಲ ಪ್ರಶ್ನೆಗಳಿಗೂ ಉತ್ತರ ಕೊಡಲು ಸಮರ್ಥರು ಪಿಪ್ಪಲಾದರು ಎಂದು ನಿರ್ಧರಿಸಿದರು. ತಡಮಾಡದೇ ಸಮಿತ್ತುಗಳನ್ನಾರಿಸಿಕೊಂಡು ಗುರುಗಳ ಮುಂದಿಟ್ಟು ನಮಸ್ಕರಿಸಿದರು.

ಪೂಜ್ಯರಾದ ಪಿಪ್ಪಲಾದರು ಹೇಳಿದರು. ''ನೀವೆಲ್ಲರೂ ಬ್ರಹ್ಮಜ್ಞಾನಿಗಳು. ತಪಸ್ಸಂಪನ್ನರು. ಆದರೂ ಸರ್ವೇಂದ್ರಿಯನಿಗ್ರಹರೂಪವಾದ ತಪಸ್ಸನ್ನಾಚರಿಸಿರಿ. ವಿಶೇಷವಾಗಿ ಬ್ರಹ್ಮಚರ್ಯ ವನ್ನು ಪಾಲಿಸಿರಿ. ಆಸ್ತಿಕ್ಯಬುದ್ಧಿಯಿಂದ ಯುಕ್ತರಾಗಿರಿ. ಹೀಗೆ ಒಂದು ವರುಷ ನಮ್ಮನ್ನು ಪರಿಚರಿಸುತ್ತಾ ಇರಿ. ನಂತರ ಯಥೇಷ್ಟವಾಗಿ ಪ್ರಶ್ನೆಗಳನ್ನು ಕೇಳಿರಿ. ನನಗೆ ತಿಳಿದಿದ್ದಲ್ಲಿ ಅವಶ್ಯವಾಗಿ ಉತ್ತರ ನೀಡುವೆ'' ಎಂದು.

ಗುರುಗಳು ಹೇಳಿದಂತೆ ಒಂದು ವರ್ಷ ತಪಸ್ಸನ್ನಾಚರಿಸಿ ಎಲ್ಲರೂ ಗುರುಗಳ ಹತ್ತಿರ ಸೇರಿದರು. ಮೊದಲು ಕಬಂಧೀ ಕಾತ್ಯಾಯನ ಪ್ರಶ್ನೆ ಕೇಳಿದ.

ಇಲ್ಲಿ ಹೆಸರುಗಳನ್ನು ಹೇಳುವಾಗ ಕಬಂಧೀ ಕಾತ್ಯಾಯನರ ಹೆಸರು ಕೊನೆಗೆ ಬಂದಿದೆ. ಆ ಕ್ರಮದಲ್ಲಿ ಇವರ ಪ್ರಶ್ನೆಯನ್ನೂ ಕೊನೆಗೆ ನಿರೂಪಿಸಬೇಕು. ನಿಜ. ಇವರ ಹೆಸರು ಕೊನೆಗೆ ಬಂದರೂ ಪ್ರಶ್ನೆ ಕೇಳಿದ್ದು ಸೃಷ್ಟಿಯ ಬಗೆಗೆ. ಮುಂದಿನವರು ಸ್ಥಿತಿ ಮೊದಲಾದ ವಿಷಯಗಳಲ್ಲಿ ಪ್ರಶ್ನೆಗಳನ್ನು ಕೇಳಿದ್ದಾರೆ. ಈ ಸೃಷ್ಟಿ ಎಲ್ಲದಕ್ಕೂ ಮೊದಲಿಗಿದ್ದದ್ದು. ಕಾರಣ ಈ ಪ್ರಶ್ನೆಯನ್ನೇ ಉಪನಿಷತ್ತು ಮೊದಲು ನಿರೂಪಣೆ ಮಾಡುತ್ತಿದೆ.

**ಕಾತ್ಯಾಯನರ ಪ್ರಶ್ನೆ**

''ಭಗವನ್ ಕುತೋ ಹವಾ ಇಮಾಃ ಪ್ರಜಾಃ ಪ್ರಜಾಯಂತೇ ಇತಿ''

ಪ್ರಜೆಗಳ ಉತ್ಪತ್ತಿ ಪ್ರತ್ಯಕ್ಷಸಿದ್ಧ. ಇದು ನಿಷ್ಕಾರಣ ಎಂದು ಹೇಳಿದರೇ ಯಾವಾಗಲೂ ಪ್ರಜೆಗಳ ಉತ್ಪತ್ತಿಯಾಗುತ್ತಲೇ ಇರಬೇಕು. ಇದು ತರವಲ್ಲ.

ಅಚೇತನ ಕಾರಣ ಎನ್ನುವ ಹಾಗಿಲ್ಲ. ಚೇತನರ ಪ್ರೇರಣೆ ಇಲ್ಲದೇ ಜಡಗಳು ಯಾವ ಕಾರ್ಯವನ್ನೂ ಮಾಡಲಾರವು.

ಅಚೇತನರನ್ನು ಪ್ರೇರಿಸುವ ಜೀವರು ಕೂಡಾ ಅಸ್ವತಂತ್ರರು. ಅವರಿಗೂ ಪ್ರೇರಕರು ಬೇಕು. ಆದ್ದರಿಂದ ಜೀವರೂ ಕಾರಣರಲ್ಲ.

ಸ್ವತಂತ್ರನಾದ ಪರಮಾತ್ಮ ಕಾರಣ ಎಂದು ಹೇಳೋಣವೆಂದರೇ ಅವನು ಕಾಣೋದೇ ಇಲ್ಲ.

ಆದ್ದರಿಂದ ಈ ಎಲ್ಲ ದೇವತೆಗಳೆ ಮೊದಲಾದ ಪ್ರಜೆಗಳಿಗೆ ನಿಮಿತ್ತನಾದ ಪುರುಷ ಯಾರು? ಎಂದು ಕಾತ್ಯಾಯನ ಕೇಳಿದ.

ಕಬಂಧಿ ಕೇಳಿದ ಈ ಪ್ರಶ್ನೆಗೆ ಪಿಪ್ಪಲಾದರು ಉತ್ತರಿಸುತ್ತಾರೆ.

ನೋಡುವ ಎಲ್ಲರಿಗೆ ಕಾಣಿಸುತ್ತಾ ಕುಂಬಾರ ಮಡಿಕೆ ಮಾಡುತ್ತಾನೆ. ಹಾಗೆ ದೇವರು ನೇರವಾಗಿ ಎಲ್ಲರಿಗೂ ಕಾಣಿಸುತ್ತಾ ಪ್ರಜೆಗಳನ್ನು ಸೃಷ್ಟಿಮಾಡುವದಿಲ್ಲ. ಕಿಂತು ಜಗತ್ತಿಗೆ ಕಾರಣರಾದ ಪ್ರಾಣಾದಿಗಳನ್ನು ಹುಟ್ಟಿಸುತ್ತಾನೆ. ಅಲ್ಲದೇ ಸ್ವಯಂ ಅವರಲ್ಲಿ ಪ್ರವೇಶ ಮಾಡುತ್ತಾನೆ. ಅವರನ್ನು ನಿಮಿತ್ತರನ್ನಾಗಿ ಮಾಡಿ ಎಲ್ಲ ಪ್ರಜೆಗಳನ್ನೂ ಸೃಷ್ಟಿಮಾಡುತ್ತಾನೆ.

ಆದ್ದರಿಂದ ದೇವರು ಕಾಣೋದಿಲ್ಲ ಎಂದ ಮಾತ್ರಕ್ಕೆ ದೇವರಿಲ್ಲ ಎಂದಾಗಲೀ, ಕಾರಣನಲ್ಲ ಎಂದಾಗಲೀ ಹಳೆಯುವದರಲ್ಲಿ ಹುರುಳಿಲ್ಲ. ಶಾಸ್ತ್ರಗಳಿಂದ ಭಗವಂತನನ್ನು, ಅವನು ಕಾರಣನೆಂಬುದನ್ನೂ ತಿಳಿಯಿರಿ. ಈ ಅಭಿಪ್ರಾಯದಿಂದ ಪಿಪ್ಪಲಾದರು ಉತ್ತರಿಸುತ್ತಿದ್ದಾರೆ.

ಸೃಷ್ಟಿಮಾಡುವುದಕ್ಕೂ ಮೊದಲು ಪರಮಾತ್ಮ ವಿಚಾರಮಾಡಿದ. ಯಾವುದೇ ಕೆಲಸ ಮಾಡಬೇಕಾದರೇ ಆಲೋಚನೆ ಆವಶ್ಯಕ. ಇದನ್ನು ತಿಳಿಸುವದೇ ಈ ಆಲೋಚನೆಯ ಉದ್ದೇಶ.

**ಆಲೋಚನೆಯ ಬಗೆ**

''ಈ ಎಲ್ಲವನ್ನೂ ನಾನೇ ಸೃಜಿಸಬಹುದು. ಹಾಗೆ ಮಾಡಿದರೇ ನನ್ನ ಸೇವಿಸುವ ಸೌಭಾಗ್ಯ ಪ್ರಾಣಭಾರತಿಯರಿಗೆ ದೊರೆಯುವದು ಹೇಗೆ? ಈ ಪ್ರಾಣಭಾರತಿಯರನ್ನು ಮಾತ್ರ ಸೃಷ್ಟಿ ಮಾಡಿದರೇ ನಾನು ಸರ್ವಕಾರಣ ಎಂದು ಆಗುವದು ಹೇಗೆ? ಸಮಸ್ಯೆ ಇಲ್ಲ. ನಾನು ಮೊದಲು ಪ್ರಾಣಭಾರತಿಯರನ್ನು ಸೃಷ್ಟಿಮಾಡುತ್ತೇನೆ. ಅವರು ಸ್ವತಂತ್ರವಾಗಿ ಸೃಷ್ಟಿಮಾಡಲು ಸಾಧ್ಯವಿಲ್ಲ. ಕಾರಣ ನಾನೇ ಅವರಲ್ಲಿ ಪ್ರವೇಶಿಸಿ ಮುಂದಿನ ಎಲ್ಲ ಸೃಷ್ಟಿ ಮಾಡಿದರಾಯಿತು. ಅವರಿಗೂ ಸೇವೆಯ ಸೌಭಾಗ್ಯ ದೊರೆಯುತ್ತದೆ. ನಾನೂ ಕಾರಣ ಎಂದಾಗುತ್ತೇನೆ'' ಎಂದೆಲ್ಲಾ ವಿಚಾರಮಾಡಿದ. ವಿತ್ತಾಭಿಮಾನಿನಿಯಾದ ಭಾರತಿಯನ್ನೂ ಪ್ರಾಣದೇವರನ್ನೂ ಭಗವಂತ ಮೊದಲು ಸೃಷ್ಟಿಮಾಡಿದ.

ಪ್ರಾಣಭಾರತಿಯರ ದ್ವಾರಾ ಭಗವಂತ ಸರ್ವವನ್ನೂ ಸೃಷ್ಟಿಮಾಡಿದ ಎಂದು ಶಾಸ್ತ್ರ ತಿಳಿಸುತ್ತದೆ. ಆದರೆ ಜಗತ್ತಿಗೆ ಕಾರಣವಾದದ್ದೇ ಬೇರೆ. ಪೃಥಿವಿ, ಜಲ, ತೇಜಸ್ಸು ಎಂಬ ಮೂರ್ತ ಪದಾರ್ಥ, ವಾಯು, ಆಕಾಶ ಇವು ಮಾತ್ರವಲ್ಲ. ಇವೆಲ್ಲದಕ್ಕೂ ಮೂಲಕಾರಣವಾದ ಪ್ರಕೃತಿ ಇವೆಲ್ಲವೂ ಅಮೂರ್ತ. ಹೀಗೆ ಮೂರ್ತಾಮೂರ್ತ ಪದಾರ್ಥಜಾತ, ಸೂರ್ಯ, ಚಂದ್ರ, ಕಾಲ, ಅನ್ನ, ಸ್ತ್ರೀ ಹಾಗು ಪುರುಷ ಇದೆಲ್ಲವೂ ಚರಾಚರಪ್ರಪಂಚಕ್ಕೆ ಕಾರಣವಾಗಿದೆ. ನಿಜ. ಇದನ್ನು ಶಾಸ್ತ್ರ ನಿರಾಕರಿಸುವದಿಲ್ಲ. ಆದರೆ ಕಾರಣವಾದ ಈ ಎಲ್ಲ ಪದಾರ್ಥಗಳನ್ನು ಸೃಜಿಸಿ ಅವುಗಳಲ್ಲಿ ಪ್ರವೇಶಮಾಡಿ ಪ್ರೇರಿಸುವವರು ಭಾರತಿ, ಪ್ರಾಣಪತಿ ಮತ್ತು ಆದಿಕಾರಣನಾದ ಪ್ರಜಾಪತಿ. ಇದನ್ನು ವಿವರವಾಗಿ ತಿಳಿಯಿರಿ.

ಭಾರತೀ ಪ್ರಾಣರ ಸೃಷ್ಟಿಯಾದ ಮೇಲೆ ತಾರತಮ್ಯ ಕ್ರಮದಲ್ಲಿ ಸೂರ್ಯಚಂದ್ರರ ಸೃಷ್ಟಿಯಾಯಿತು. ನಂತರ ಪ್ರಜಾಪತಿ ಆದಿತ್ಯನಾಮಕರಾದ ವಾಯುದೇವರನ್ನು ಆದಿತ್ಯನಲ್ಲಿ ಪ್ರವೇಶ ಮಾಡಿಸಿದ. ಚಂದ್ರಾನಾಮಕಳಾದ ಭಾರತಿಯನ್ನು ಚಂದ್ರನಲ್ಲಿ ಪ್ರವೇಶ ಮಾಡಿಸಿದ. ಹೀಗೆ ಚಂದ್ರಸೂರ್ಯರಲ್ಲಿ ಪ್ರವೇಶ ಮಾಡಿದ ಭಾರತೀಪ್ರಾಣರು ಚಂದ್ರಸೂರ್ಯರಿಗೆ ನಿಯಾಮಕರಾದರು.

ಆದಿತ್ಯನಲ್ಲಿ ಪ್ರವೇಶಿಸಿದ ಪ್ರಾಣ ಉದಯಿಸುತ್ತಾ ಸಮಗ್ರದಿಕ್ಕುಗಳನ್ನು ವ್ಯಾಪಿಸಿ ಎಲ್ಲ ಕಡೆಗಿನ ಸೃಷ್ಟಿಗೆ ಕಾರಣನಾಗುತ್ತಾನೆ. ಆಯಾ ದಿಕ್ಕುಗಳ ಅಭಿಮಾನಿಗಳು ಹೀಗಿದ್ದಾರೆ. ಪೂರ್ವ ಹಾಗೂ ಆಗ್ನೇಯಕ್ಕೆ ಅಭಿಮಾನಿಗಳು ಇಂದ್ರ, ಅಗ್ನಿ, ಶಚೀ, ಸ್ವಾಹಾ. ದಕ್ಷಿಣ ಹಾಗೂ ನೈಋತ್ಯಕ್ಕೆ ಯಮ, ಶ್ಯಾಮಲಾ, ನಿಋತಿ, ದೀರ್ಘಗ್ರೀವಾ ಅಭಿಮಾನಿಗಳು. ಪಶ್ಚಿಮ ಹಾಗೂ ವಾಯವ್ಯಕ್ಕೆ ವರುಣ, ಗಂಗಾ, ವಾಯು,ತತ್ಪತ್ನೀ ಅಭಿಮಾನಿಗಳು. ಉತ್ತರಕ್ಕೆ ಹಾಗೂ ಈಶಾನ್ಯಕ್ಕೆ ಚಂದ್ರ, ತಾರಾ, ಈಶಾನ, ತತ್ಪತ್ನೀ ಅಭಿಮಾನಿಗಳಾಗಿದ್ದಾರೆ. ಊರ್ಧ್ವಕ್ಕೆ ಅಭಿಮಾನಿಗಳು ಗರುಡ, ಸೌಪರ್ಣೀ, ಕಾಮ, ರತಿಯರು. ಅಧೋ ದಿಕ್ಕಿಗೆ ಶೇಷ, ವಾರುಣೀ, ಮಿತ್ರ, ಚೇತೀ ಅಭಿಮಾನಿಗಳಾಗಿದ್ದಾರೆ. ಮೇಲೆ ಹಾಗೂ ಕೆಳಗಿನ ಮಧ್ಯದಲ್ಲಿರುವ ದಿಕ್ಕಿಗೆ ವಿನಾಯಕ,ತತ್ಪತ್ನೀ, ವಿವಸ್ವಾನ್, ಸಂಜ್ಞಾ ಅಭಿಮಾನಿಗಳಾಗಿದ್ದಾರೆ. ಹೀಗೆ ಆಯಾ ದಿಕ್ಕು ವಿದಿಕ್ಕುಗಳಿಗೆ ಅಭಿಮಾನಿಗಳಾದ ದೇವತೆಗಳನ್ನು ಸೂರ್ಯನ ಕಿರಣಗಳಿಂದ ವ್ಯಾಪಿಸಿ ಅವರಿಗೆ ಪ್ರಾಣದೇವರು ನಿಯಾಮಕರಾಗಿದ್ದಾರೆ. ಹಾಗೂ ಆಯಾ ದಿಕ್ಕು, ವಿದಿಕ್ಕುಗಳಲ್ಲಿ ನಡೆಯುವ ಸೃಷ್ಟಿಕ್ರಿಯೆಗೆ ಕಾರಣರಾಗಿದ್ದಾರೆ.

ಹಾಗೆಯೇ ಪ್ರಜೋತ್ಪತ್ತಿಗೆ ಕಾರಣವಾದದ್ದು ಓಷಧಿವನಸ್ಪತಿಗಳು. ಚಂದ್ರನಲ್ಲಿಯ ಕಿರಣಗಳ ದ್ವಾರಾ ಆ ಓಷಧಿವನಸ್ಪತಿಗಳ ಪುಷ್ಟಿಗೆ ಕಾರಣಳಾಗಿದ್ದಾಳೆ ಚಂದ್ರಾಂತರ್ಗತ ಚಂದ್ರನಿಯಾಮಕಳಾದ ಭಾರತೀ.

ಹೀಗೆ ಪ್ರಾಣಭಾರತಿಯರು ಪ್ರಜೋತ್ಪತ್ತಿಗೆ ಕಾರಣವಾದವುಗಳಲ್ಲಿ ವ್ಯಾಪಿಸಿ ಅವುಗಳನ್ನು ನಿಯಮಿಸುತ್ತಾ ಕಾರಣರಾಗಿದ್ದಾರೆ.

ಅಲ್ಲದೆ ಸಮಸ್ತ ಬ್ರಹ್ಮಾಂಡಕ್ಕೆ ಉಪಾದಾನ ಇಪ್ಪತ್ತುನಾಲ್ಕು ತತ್ತ್ವಗಳು. ಆ ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಪೃಥಿವಿ, ಜಲ, ತೇಜಸ್ಸು ಇವುಗಳು ಮೂರ್ತ. ಈ ಮೂರ್ತಕ್ಕೆ ನಿಯಾಮಕಳು ಭಾರತೀ. ಉಳಿದ ವಾಯು, ಆಕಾಶ ಹಾಗೂ ಹತ್ತೊಂಬತ್ತು ತತ್ತ್ವಗಳನ್ನು ಅಮೂರ್ತ ಎಂದು ಹೆಸರಿಸಿದ್ದಾರೆ. ಇವುಗಳಿಗೆ ನಿಯಾಮಕರಾದವರು ಪ್ರಾಣದೇವರು. ಹೀಗೆ ಮೂರ್ತಾಮೂರ್ತನಿಯಾಮಕರಾಗಿ ಅವುಗಳಿಗೆ ಉಪಾದಾನತ್ವಶಕ್ತಿಯನ್ನು ಕೊಟ್ಟು ತದ್ವಾರಾ ಜಗತ್ಕಾರಣರಾಗಿದ್ದಾರೆ.

ಸೂರ್ಯ ಹುಟ್ಟುವಾಗ ಹಲವಾರು ಶಕ್ತಿಗಳಿಂದ ಸಹಿತನಾಗಿ ಉದಯಿಸುತ್ತಾನೆ. ಅವುಗಳಲ್ಲಿ ಪ್ರಕಾಶನ, ತಾಪನ, ಪಾಚನ, ಶೋಷಣ ಈ ಶಕ್ತಿಗಳು ಪ್ರಧಾನವಾಗಿವೆ. ಹಾಗೂ ಜಗತ್ತಿಗೆ ಕಾರಣವಾಗಿವೆ. ಇಂತಹಾ ಶಕ್ತಿಯನ್ನಾದಿತ್ಯನಲ್ಲಿಟ್ಟು ಮುಖ್ಯಪ್ರಾಣ ಜಗತ್ಕಾರಣನಾಗಿದ್ದಾನೆ.

ಇದಲ್ಲದೇ ಜಗತ್ತಿಗೆ ಮತ್ತೊಂದು ಕಾರಣ ಕಾಲ. ಇಂತಹಾ ಮಹಾಕಾಲದ ವಿಭಾಗವಾದ ಸಂವತ್ಸರದಲ್ಲಿ ಸಂವತ್ಸರ ನಾಮಕನಾಗಿ ನಿಯಾಮಕನಾಗಿದ್ದವನು ಪ್ರಜಾಪತಿ.

ಸಂವತ್ಸರಕ್ಕೆ ಎರಡು ಅಯನಗಳು. ಉತ್ತರಾಯಣ ಹಾಗೂ ದಕ್ಷಿಣಾಯನ.

ಚಂದ್ರನಿಯಾಮಕಳಾದವಳು ಭಾರತೀ ಎಂಬುದನ್ನರಿತಿದ್ದೇವೆ. ಇಂತಹಾ ಚಂದ್ರಲೋಕ ತಲುಪಿಸುವ ಮಾರ್ಗ ದಕ್ಷಿಣಾಯನ. ಇದನ್ನು ಪಿತೃಯಾಣ ಎಂತಲೂ ವ್ಯವಹರಿಸುತ್ತಾರೆ. ಹೀಗಾಗಿ ಈ ದಕ್ಷಿಣಾಯನ ಮಾರ್ಗಕ್ಕೂ ನಿಯಾಮಕಳು ಭಾರತೀ.

ಮೋಕ್ಷ, ಜ್ಞಾನ, ಭಕ್ತಿ, ವೈರಾಗ್ಯ, ಹರಿಪ್ರೀತಿ ಇವುಗಳು ಕಾಮವೆನಿಸಲಾರವು. ಇವುಗಳ ಹೊರತು ಸಂತಾನ, ಸೌಭಾಗ್ಯ, ಸಂಪತ್ತು, ಸಮೃದ್ಧಿ ಮೊದಲಾದವುಗಳು ಕಾಮವೆನಿಸುತ್ತವೆ. ಇವುಗಳನ್ನಪೇಕ್ಷಿಸಿ ಸ್ವವಿಹಿತವಾದ ಇಷ್ಟ(ಯಜ್ಞ,ಯಾಗಾದಿಗಳು) ಪೂರ್ತ (ಅನ್ನದಾನಾದಿಗಳು) ಮೊದಲಾದ ಕರ್ಮಗಳನ್ನಾಚರಿಸಿದ ಋಷಿಗಳು ಈ ಪಿತೃಯಾಣ ಮಾರ್ಗದಿಂದ ಭಾರತೀನಿಯಮ್ಯವಾದ ಚಂದ್ರಲೊಕಕ್ಕೆ ಹೋಗುತ್ತಾರೆ. ಮತ್ತೆ ತಿರುಗಿ ಸಂಸಾರಕ್ಕೆ ಬರುತ್ತಾರೆ.

ಆದಿತ್ಯನಿಯಾಮಕನಾದವನು ಮುಖ್ಯಪ್ರಾಣ. ಆದಿತ್ಯಲೋಕ ತಲುಪಿಸುವ ಮಾರ್ಗ ಉತ್ತರಾಯಣ. ಇದು ದೇವಯಾನ. ಈ ಮಾರ್ಗಕ್ಕೂ ವಾಯುದೇವರೇ ನಿಯಾಮಕರು.

ಮುಮುಕ್ಷುಗಳಾದ ನಿಷ್ಕಾಮಕರ್ಮಿಗಳು ಇಷ್ಟಾಪೂರ್ತಗಳನ್ನು ಕೂಡಾ ವಿಷಯಗಳ ಬಯಸದೇ ಮಾಡುತ್ತಾರೆ. ಅಲ್ಲದೇ ಇಂದ್ರಿಯನಿಗ್ರಹರೂಪವಾದ ತಪಸ್ಸು, ವಿಶೇಷವಾದ, ಗುಹ್ಯೇಂದ್ರಿಯನಿಗ್ರಹರೂಪವಾದ ಬ್ರಹ್ಮಚರ್ಯಗಳನ್ನು ಪಾಲಿಸುತ್ತಾರೆ. ಶ್ರದ್ಧೆಯಿಂದ ಪರಮಾತ್ಮನನ್ನು ವಿಚಾರಮಾಡುತ್ತಾರೆ. ಅವನ ಅನುಗ್ರಹದಿಂದ ಆದಿತ್ಯಲೊಕವನ್ನು ಹೊಂದುತ್ತಾರೆ. ಇಲ್ಲಿ ಸೇರಿದವರಿಗೆ ಪುನರಾವೃತ್ತಿ ಇಲ್ಲ. ಇಂತಹಾ ಲೊಕಕ್ಕೆ ನಿಯಾಮಕರು ವಾಯುದೇವರು.

ಸಕಲಕ್ಕೂ ಕಾರಣವಾದ ಕಾಲದಲ್ಲಿ ಮತ್ತೊಂದು ವಿಭಾಗ ಮಾಸ. ಈ ಮಾಸದಲ್ಲಿ ಕೃಷ್ಣಪಕ್ಷ, ಶುಕ್ಲಪಕ್ಷ ಎಂದು ಎರಡು ಪಕ್ಷಗಳಿವೆ. ಇಲ್ಲಿ ಮಾಸನಿಯಾಮಕನಾದವನು ಪ್ರಜಾಪತಿ. ಕೃಷ್ಣಪಕ್ಷಕ್ಕೆ ಭಾರತೀದೇವಿ ನಿಯಾಮಕಳಾಗಿದ್ದಾಳೆ. ಪ್ರಾಣನಿ[illegible]ವಾದದ್ದು ಶುಕ್ಲಪಕ್ಷ.

ಕಾಮನೆಗಳನ್ನು ಬಯಸುವವರು ಸಕಾಮವಾದ ಭಾರತೀಪೂಜಾರೂಪವಾದ ಯಜ್ಞಯಾಗಾದಿಗಳನ್ನು ವಿಶೇಷವಾಗಿ ಕೃಷ್ಣಪಕ್ಷದಲ್ಲಿ ಮಾಡುತ್ತಾರೆ.

ನಿಷ್ಕಾಮಕರ್ಮವನ್ನು ಮಾಡುವ ಋಷಿಗಳು ಪ್ರಾಣಪೂಜಾರೂಪವಾದ ಯಜ್ಞಯಾಗಾದಿಗಳನ್ನು ವಿಶೇಷವಾಗಿ ಶುಕ್ಲಪಕ್ಷದಲ್ಲಿ ಮಾಡುತ್ತಾರೆ.

ಕಾಲದ ಮತ್ತೊಂದು ವಿಭಾಗ ಅಹೋರಾತ್ರಿ ರೂಪವಾದ ದಿವಸ. ದಿವಸಕ್ಕೆ ನಿಯಾಮಕ ಪ್ರಜಾಪತಿ. ಹಗಲಿಗೆ ನಿಯಾಮಕ ಮುಖ್ಯಪ್ರಾಣ. ಭಾರತೀ ರಾತ್ರಿಗೆ ನಿಯಾಮಕಳಾಗಿದ್ದಾಳೆ.

ಅಲ್ಲದೇ ಪ್ರಜಾಕಾರಣರಾದ ದಂಪತಿಗಳಿಗೆ ನಿಯಾಮಕ ಪ್ರಜಾಪತಿ. ದಂಪತಿಗಳಲ್ಲಿ ಪತಿಗೆ ಮುಖ್ಯಪ್ರಾಣ, ಪತ್ನಿಗೆ ಭಾರತೀದೇವಿಯರು ನಿಯಾಮಕರಾಗಿದ್ದಾರೆ.

ಹೀಗೆ ರಾತ್ರಿಗೆ ಮತ್ತು ಪತ್ನಿಗೆ ನಿಯಾಮಕಳು ಭಾರತೀದೇವಿ. ಆದ್ದರಿಂದ ರಾತ್ರಿಯಲ್ಲಿ ಹಾಗೂ ಸ್ತ್ರೀಯರಲ್ಲಿ ಭಾರತಿಯ ವಿಶೇಷಸನ್ನಿಧಾನವಿರುತ್ತದೆ. ಅದರಲ್ಲೂ ಹಗಲಿಗಿಂತಲೂ ರಾತ್ರಿಯೇ ಸ್ತ್ರೀಯರಲ್ಲಿ ಭಾರತೀದೇವಿಯರ ವಿಶೇಷ ಸನ್ನಿಧಾನ.

ಹಾಗೆಯೇ ಹಗಲಿಗೆ, ಪುರುಷರಿಗೆ ನಿಯಾಮಕರು ಮುಖ್ಯಪ್ರಾಣರು. ಹೀಗಾಗಿ ರಾತ್ರಿಗಿಂತಲೂ ಹಗಲೇ ಪುರುಷರಲ್ಲಿ ಪ್ರಾಣರ ವಿಶೇಷ ಸನ್ನಿಧಾನ.

ಪುರುಷನಲ್ಲಿ ವಾಯುದೇವರ ವಿಶೇಷ ಸನ್ನಿಧಾನವಿರುವಾಗ ಭಾರತಿಯ ವಿಶೇಷ ಸನ್ನಿಧಾನವಿಲ್ಲದಿರುವ ಪತ್ನಿಯ ಸಂಪರ್ಕವಾದರೆ ವಾಯುದೇವರಿಗೆ ನಿಜವಾಗಿ ಭಾರತಿಯ ಸಂಪರ್ಕವಾಗದೇ ಇದ್ದಂತೆ.

ಏಕೆಂದರೆ ಹಗಲಿನಲ್ಲಿಯೂ ಸ್ತ್ರೀಯರಲ್ಲಿ ಭಾರತಿಯ ಸನ್ನಿಧಾನವಿದೆ. ಆದರೆ ಆ ಸನ್ನಿಧಾನ ಪುರುಷರಲ್ಲಿಯ ವಾಯುದೇವರ ಸನ್ನಿಧಾನಕ್ಕೆ ಸಮವಾದುದಲ್ಲ. ಹೀಗಾಗಿ ಪ್ರಾಣನ ಅಧಿಕ ಸನ್ನಿಧಾನದಿಂದ ಯುಕ್ತನಾದ ಪುರುಷ, ಭಾರತಿಯ ಅಲ್ಪಸನ್ನಿಧಿಯಿಂದ ಯುಕ್ತಳಾದ ಪತ್ನಿಯ ಜೊತೆ ಸಂಗ ಮಾಡಿದಲ್ಲಿ ವಾಯುದೇವರಿಗೆ ಅಪಚಾರವೆಸಗಿದಂತಾಗುತ್ತದೆ.

ರಾತ್ರಿ ಕಾಲದಲ್ಲಿ ಪ್ರಾಣನ ಸನ್ನಿಧಾನ ಪುರುಷನಲ್ಲಿ ಅಲ್ಪವಾಗಿದೆ. ಆದರೂ ಆ ಸನ್ನಿಧಾನ ಸ್ತ್ರೀಯರಲ್ಲಿ ಇರುವ ಭಾರತಿಯ ಸನ್ನಿಧಾನಕ್ಕೆ ಸಮವಾದದ್ದು. ಹೀಗಾಗಿ ರಾತ್ರಿಕಾಲದಲ್ಲಿ ಸ್ತ್ರೀಸಂಗ ಮಾಡಿದರೆ ಅದು ಬ್ರಹ್ಮಚರ್ಯಕ್ಕೆ ಸಮನಾದದ್ದೇ ಆಗುತ್ತದೆ.

ಹೀಗೆ ಸಂವತ್ಸರ, ದಕ್ಷಿಣಾಯನ, ಉತ್ತರಾಯಣ, ಮಾಸ, ಶುಕ್ಲಪಕ್ಷ, ಕೃಷ್ಣಪಕ್ಷ, ಅಹೋರಾತ್ರ, ಹಗಲು, ರಾತ್ರಿಗಳಲ್ಲಿ, ಪತಿಪತ್ನಿಯರಲ್ಲಿ ಪ್ರಜಾಪತಿ, ಪ್ರಾಣಪತಿ, ಭಾರತಿಯರು ಸನ್ನಿಹಿತರಾಗಿದ್ದು ಸಕಲ ಜೀವರಾಶಿಗಳ ಉತ್ಪತ್ತಿಗೆ ಕಾರಣರಾಗಿದ್ದಾರೆ.

ಅಲ್ಲದೆ ಮತ್ತೊಂದು ರೀತಿಯಲ್ಲೂ ಪರಮಾತ್ಮ ಪ್ರಜೋತ್ಪತ್ತಿಗೆ ಕಾರಣನಾಗಿದ್ದಾನೆ.

ಪ್ರಜೋತ್ಪತ್ತಿಯಾಗುವದು ರೇತಸ್ಸಿನಿಂದ. ರೇತಸ್ಸಿಗೆ ಉಪಾದಾನ ಅನ್ನ. ಅಂತಹ ಅನ್ನದಲ್ಲಿ ಪರಮಾತ್ಮ ನಿಯಾಮಕನಾಗಿದ್ದಾನೆ.

ಯಾರು ಸತ್ಯವಂತರೋ, ಪೂರ್ವೋಕ್ತ ಬ್ರಹ್ಮಚರ್ಯವನ್ನು ಪಾಲಿಸುವರೋ ತಪಸ್ಸಂಪನ್ನರಾಗಿರುವರೋ ಮೋಸ, ಸುಳ್ಳು, ವಂಚನೆ ಇತ್ಯಾದಿಗಳಿಂದ ನಿವೃತ್ತರಾಗಿರುವರೋ ಅಂಥವರಿಗೆ ಮಾತ್ರ ಸ್ತ್ರೀಸಂಗ ಮಾಡುವ ಕಾಲದಲ್ಲಿ ಪ್ರಜಾಪತಿಯ ಈ ಕರ್ಮದ ಅನುಸಂಧಾನ ಸಾಧ್ಯವಾಗುತ್ತದೆ. ಹೀಗೆ ಅನುಸಂಧಾನ ಮಾಡಿದವರಿಗೆ ಮಾತ್ರ ಧಾರ್ಮಿಕರಾದ ಮಕ್ಕಳು ಜನಿಸುತ್ತಾರೆ. ಅವರು ಮಾತ್ರ ಸಾರವಿಲ್ಲದ ಸಂಸಾರವನ್ನು ತೊರೆದು ಪರಮಪದವ ಪಡೆಯುತ್ತಾರೆ. ಇದು ಸತ್ಯ.

## ದ್ವಿತೀಯ ಪ್ರಶ್ನೆ

ಕಬಂಧೀ ಕಾತ್ಯಾಯನರು ಉತ್ತರ ಪಡೆದ ನಂತರ ಭಾರ್ಗವ ವೈದರ್ಭಿ ಪಿಪ್ಪಲಾದರಿಗೆ ಪ್ರಶ್ನಿಸಿದ. ''ಭಗವನ್ ಹುಟ್ಟಿದ ಪ್ರಜೆಗಳನ್ನು ರಕ್ಷಣೆ ಮಾಡುವ ದೇವತೆಗಳೆಷ್ಟು? ವH ಜ್ಞಾನಾದಿಗಳನ್ನು ದಯಪಾಲಿಸುವ ದೇವತೆಗಳಾರು? ಹೀಗೆ ಧಾರಕ, ಪ್ರಕಾಶಕರಾದ ದೇವತೆಗಳಲ್ಲಿ ಉತ್ತಮರಾದವರಾರು'' ? ಎಂದು.

ಹೀಗೆ ಕೇಳಿದ ಪ್ರಶ್ನೆಗಳಿಗೆ ಪಿಪ್ಪಲಾದರು ಉತ್ತರಿಸಿದರು.

ಪಂಚಮಹಾಭೂತಗಳು, ಪಂಚತನ್ಮಾತ್ರಾಗಳು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ತದಭಿಮಾನಿಗಳಾದ ದೇವತೆಗಳು ಹಾಗು ಮುಖ್ಯಪ್ರಾಣದೇವರು ದೇಹಧಾರಕರೂ, ವಿಷಯಪ್ರಕಾಶಕರೂ ಆಗಿದ್ದಾರೆ.

ಇವರಲ್ಲಿ ಜ್ಞಾನೇಂದ್ರಿಯಾಭಿಮಾನಿದೇವತೆಗಳು ವಿಷಯಪ್ರಕಾಶಕರಾಗಿದ್ದಾರೆ. ಉಳಿದ ದೇವತೆಗಳು ದೇಹಧಾರಕರಾಗಿದ್ದಾರೆ. ಇವರೆಲ್ಲರಿಗೂ ನಿಯಾಮಕರಾಗಿರುವವರು ಮುಖ್ಯಪ್ರಾಣರು.

ಈ ದೇವತೆಗಳೆಲ್ಲ ''ನಾನೇ ಪ್ರಜರ ದೇಹಗಳನ್ನು ಧಾರಣೆ ಮಾಡುವವನು. ನಾನೇ ಇವರಿಗೆ ಜ್ಞಾನವನ್ನು ನೀಡುವವನು'' ಎಂದು ಸ್ಪರ್ಧೆಯಿಂದ ವಾದಮಾಡುತ್ತಲಿದ್ದಾಗ ಮುಖ್ಯಪ್ರಾಣ ಇವರೆಲ್ಲರಿಗೆ ತಿಳಿಸಿದ. ''ನಾನೇ ಧಾರಕ, ಪ್ರಕಾಶಕ'' ಎಂಬ ಮೋಹದಲ್ಲಿ ಸಿಲುಕಬೇಡಿ. ನಿಮ್ಮಲ್ಲಿ ಯಾರೂ ಮುಖ್ಯವಾಗಿ ಧಾರಕರು, ಪ್ರಾಕಶಕರು ಅಲ್ಲ. ''ವHನಾನೇ ಪಂಚರೂಪಗಳನ್ನು ಸ್ವೀಕಾರಮಾಡಿ ಈ ದೇಹವನ್ನು ಧಾರಣೆ ಮಾಡುತ್ತೇನೆ. ಜ್ಞಾನವನ್ನು ನೀಡುವವನೂ ನಾನೇ''

ಎಂದು. ದೇವತೆಗಳಿಗೆ ವಾಯುದೇವರ ಮಾತಿನ ಮೇಲೆ ವಿಶ್ವಾಸ ಬರಲಿಲ್ಲ. ಆಗ ತನ್ನ ಸಾಮರ್ಥ್ಯವನ್ನು ತೋರಿಸುವದಕ್ಕಾಗಿ ಬ್ರಹ್ಮದೇವರ ದೇಹವನ್ನು ಬಿಟ್ಟು ಮೇಲೆ ಹೊರಟರು. ಅವರು ಹೋಗುವಾಗ ದೇವತೆಗಳಿಗೆ ದೇಹದಲ್ಲಿ ಇರಲಾಗಲಿಲ್ಲ. ಪ್ರಾಣದೇವರ ಶಕ್ತಿಯಿಂದ ಆಕೃಷ್ಟರಾಗಿ ದೇವತೆಗಳೆಲ್ಲ ಅವರನ್ನು ಹಿಂಬಾಲಿಸಿದರು. ನಂತರ ವಾಯುದೇವರು ದೇಹದಲ್ಲಿ ಪ್ರವೇಶಮಾಡಿದರು. ಅವರಿಲ್ಲದೆ ದೇವತೆಗಳಿಗೆ ಹೊರಗುಳಿಯಲೂ ಸಾಧ್ಯವಾಗಲಿಲ್ಲ. ವಾಯುದೇವರನ್ನನುಸರಿಸಿ ಮತ್ತೆ ದೇಹವನ್ನು ಪ್ರವೇಶಿಸಿದರು.[1]

ಇದಕ್ಕೊಂದು ದೃಷ್ಟಾಂತವನ್ನೂ ತಿಳಿಸುತ್ತೇನೆ ಕೇಳಿ.

ಹಿರಿದಾದ ದುಂಬಿಯು ಹೊರಟಾಗ ಹೊರಟು, ನಿಂತಲ್ಲಿ ನಿಂತು, ತಿಂದಾಗ ತಿಂದು ಇರುತ್ತವೆ ಪರಿವಾರದುಂಬಿಗಳು. ಹಾಗೆ ಧಾರಕ, ಪ್ರಕಾಶಕರಾದ ದೇವತೆಗಳು ಮುಖ್ಯಪ್ರಾಣನನ್ನನುಸರಿಸಿಯೇ ಸಕಲ ಕರ್ಮಗಳನ್ನು ಮಾಡುತ್ತಾರೆ. ಇವರ ಒಲವು ಇಲ್ಲದಿದ್ದಲ್ಲಿ ದೇವತೆಗಳೇನೂ ಮಾಡಲಾರರು. ಇದನ್ನು ಮನಗಂಡು ದೇವತೆಗಳು ಪ್ರಾಣಪತಿಯನ್ನು ಹೀಗೆ ತುತಿಸಿ ಕೃತಾರ್ಥರಾದರು.

''ಹೇ ಭಗವನ್ ಅಗ್ನಿಯಲ್ಲಿ ಸನ್ನಿಹಿತನಾಗಿ ನಾನಾತರಹದ ಶಕ್ತಿಗಳನ್ನು ಕೊಟ್ಟು ಆ ತತ್ತ್ವವನ್ನು ಪ್ರೇರಿಸುವವನು ನೀನೇ. ಸೂರ್ಯನಿಗೆ ಪ್ರಕಾಶ ಮೊದಲಾದ ಶಕ್ತಿಯನ್ನು ನೀಡಿದವನು ನೀನೇ. ಇಂದ್ರನಲ್ಲಿದ್ದು ಮೂರ್ಲೋಕವನ್ನು ಪಾಲನೆ ಮಾಡುತ್ತಿ. ಪಂಚಮಹಾಭೂತಗಳಿಂದ ಪ್ರಾರಂಭಮಾಡಿ ಪ್ರಕೃತಿವರೆಗಿರುವ ತತ್ತ್ವಗಳು ನಿನ್ನ ಸಂಪತ್ತು. ನೀನೇ ಇವೆಲ್ಲದಕ್ಕು ಪ್ರೇರಕ ಶಕ್ತಿ. ನೀನಿಲ್ಲದೇ ಇವುಗಳಿಗೆ ಅಸ್ತಿತ್ವವಿಲ್ಲ'' ಎಂಬುದಾಗಿ ಸ್ತುತಿಸಿದರು.

''ರಥಚಕ್ರದ ಮಧ್ಯಭಾಗವನ್ನಾಶ್ರಯಿಸಿ ಹಲ್ಲುಗಳಿದ್ದಂತೆ ನಿನ್ನನ್ನಾಶ್ರಯಿಸಿಯೇ ಸಕಲ ಚರಾಚರಪ್ರಪಂಚವಿದೆ. ಗರ್ಭ ಬೆಳೆಯುವುದಕ್ಕೆ, ಅದು ಸುರಕ್ಷಿತವಾಗಿರುವುದಕ್ಕೆ, ಅದರ ಹುಟ್ಟಿಗೆ ಕಾರಣರಾದವರು ನೀವು. ಅಗ್ನಿಯಲ್ಲಿದ್ದು ದೇವತೆಗಳಿಗೆ ಆಹುತಿಯನ್ನು ತಲುಪಿಸುವವರು ನೀವು. ಪಿತೃಗಳಿಗೆ ಶ್ರಾದ್ಧಫಲ ತಲುಪಿಸುವವರೂ ನೀವೇ. ಅಥರ್ವಾಂಗಿರಸ

---

1. ಈ ಕಥೆ ಛಾಂದೋಗ್ಯ ಹಾಗು ಐತರೇಯೋಪನಿಷತ್ತಿನಲ್ಲಿ ಹೀಗೆ ನಿರೂಪಿತವಾಗಿದೆ. ಬ್ರಹ್ಮದೇವರ ದೇಹದಿಂದ ದೇವತೆಗಳು ಒಬ್ಬೊಬ್ಬರಾಗಿ ನಿಷ್ಕ್ರಮಿಸುತ್ತಾರೆ. ಅದರಂತೆ ಒಂದೊಂದು ಇಂದ್ರಿಯಗಳು ಕುಂಠಿತವಾಗುತ್ತವೆ. ಪ್ರಾಣನ ನಿಷ್ಕ್ರಮಣದಿಂದ ದೇಹಪಾತವಾಗುತ್ತದೆ. ಮತ್ತೆ ದೇವತೆಗಳು ಒಬ್ಬೊಬ್ಬರಾಗಿ ಪ್ರವೇಶಿಸುತ್ತಾರೆ. ದೇಹೋತ್ಥಾನವಾಗುವದಿಲ್ಲ. ಪ್ರಾಣರ ಪ್ರವೇಶದಿಂದ ಚೈತನ್ಯ ಪ್ರಾಪ್ತವಾಗುತ್ತದೆ ಎಂದು. ಇಲ್ಲಿ ಪ್ರಾಣನ ನಿಷ್ಕ್ರಮಣವನ್ನೆ ಮೊದಲಿಗೆ ಹೇಳುತ್ತಾರೆ. ಹೀಗೆ ಒಂದೊಂದು ಉಪನಿಷತ್ತಿನಲ್ಲಿ ಒಂದೊಂದು ರೀತಿಯಾಗಿ ಕಥೆ ಬಂದಿದೆ. ಆದರೂ ಒಂದೊಂದು ಕಲ್ಪದಲ್ಲಿ ಒಂದೊಂದು ರೀತಿಯಾಗಿ ಈ ಘಟನೆ ಎಂದಾಗಲಿ ಅಥವಾ ಒಂದೇ ಕಲ್ಪದಲ್ಲಿ ಎರಡು ರೀತಿಯಾಗಿ ಪ್ರಾಣನ ಉತ್ತಮತೆಯನ್ನು ದೃಢಪಡಿಸುವ ಪ್ರತ್ಯೇಕ ಘಟನೆಗಳೆಂದಾದರೂ ಸಮಾಧಾನವನ್ನು ಹೇಳಿದಲ್ಲಿ ಯಾವ ವಿರೋಧವೂ ಇಲ್ಲ.

ಮೊದಲಾದ ಋಷಿಗಳು ನಡಿಸುವ ಶುದ್ಧವಾದ ಜೀವನವನ್ನು, ನಿಷ್ಠೆಯನ್ನು, ಬ್ರಹ್ಮಚರ್ಯವನ್ನು ನಿಯಮನೆ ಮಾಡುವವರು ನೀವು.

ಇಂದ್ರ, ರುದ್ರ ಮೊದಲಾದ ದೇವತೆಗಳನ್ನು ಪ್ರೇರಿಸುವವರೂ, ಸೂರ್ಯನೊಳಗಿದ್ದು ಸಕಲ ಗ್ರಹನಕ್ಷತ್ರ ಮೊದಲಾದವುಗಳಿಗೆ ನಿಯಾಮಕರಾದವರು ನೀವು.

ಪರ್ಜನ್ಯನಲ್ಲಿದ್ದು ನೀವು ಮಳೆ ಸುರಿಸಿದರೆ ಮಾತ್ರ ಅನ್ನವನ್ನು ಯಥೇಷ್ಟವಾಗಿ ಪಡೆದು ಪ್ರಜೆಗಳು ಸಂತೋಷದಿಂದ ಬದುಕುತ್ತಾರೆ.

ಅಥರ್ವವೇದದ ದ್ರಷ್ಟಾರರಾದ ಏಕರ್ಷಿಗಳಿಗೆ ಪ್ರೇರಕರು ನೀವು. ಸರ್ವಸಂಹಾರಕರಾದ ನಿಮ್ಮ ಪೂಜೆ ಮಾಡುವವರು ನಾವೆಲ್ಲ, ಭೂತವಾಯುವಿಗೆ ತಂದೆಯಾದ ನೀವು ನಮಗೆಲ್ಲರಿಗೂ ತಂದೆಯಾಗಿದ್ದೀರಿ.

ಮಾತಿನಲ್ಲಿ, ಕರ್ಣದಲ್ಲಿ, ಕಣ್ಣಿನಲ್ಲಿ, ಮನಸ್ಸಿನಲ್ಲಿ, ಉಳಿದ ಎಲ್ಲ ತತ್ತ್ವಗಳಲ್ಲಿ ನಿಮ್ಮ ಸನ್ನಿಧಾನ ತುಂಬಿದೆ. ಅದು ಹಾಗೆಯೆ ಇರಲಿ. ಇಂದ್ರಿಯಗಳಿಂದ ಉತ್ಕ್ರಾಂತರಾಗಬೇಡಿ. ಇವೆಲ್ಲ ಇಂದ್ರಿಯಗಳು ನಿಮ್ಮ ಅಧೀನ. ನೀವಿದ್ದಲ್ಲಿ ಮಾತ್ರ ಇಂದ್ರಿಯಳಿಗೆ ಪ್ರವೃತ್ತಿ. ನಾವು ಯಾರೂ ಅವುಗಳ ಪ್ರವೃತ್ತಿಗೆ ಕಾರಣರಲ್ಲ, ನೀವೇ ನಮಗೆಲ್ಲ ಧಾರಕತ್ವ, ಪ್ರಕಾಶಕತ್ವ ಶಕ್ತಿಯನ್ನು ನೀಡಿ ತಾಯಿಯಂತೆ ರಕ್ಷಿಸುತ್ತಿರುವವರು'' ಎಂಬುದಾಗಿ ಪ್ರಾರ್ಥಿಸಿದರು. ಇದರಿಂದ ಪ್ರಾಣದೇವರೇ ತತ್ತ್ವದೇವತೆಗಳೆಲ್ಲ ವಿಶ್ರಾಂತರಾದಾಗ ಎಚ್ಚರದಿಂದ್ದು ನಮ್ಮೆಲ್ಲ ವ್ಯಾಪಾರಗಳನ್ನು ಮಾಡುತ್ತಾರೆ. ಆದ್ದರಿಂದ ಧಾರಕ, ಪ್ರಕಾಶಕರಾದ ದೇವತೆಗಳಲ್ಲಿ ಮುಖ್ಯಪ್ರಾಣರೇ ಉತ್ತಮರೆಂಬುದು ಸಿದ್ಧವಾಗುತ್ತದೆ.

## ತೃತೀಯ ಪ್ರಶ್ನೆ

ನಂತರ ಆಶ್ವಲಾಯನ ಕೌಸಲ್ಯ ಗುರುಗಳ ಸನಿಹ ಸೇರಿ ಪ್ರಶ್ನಿಸಿದ. ಭಗವನ್ ಸಕಲ ಜೀವರ ದೇಹಧಾರಕನೂ, ಸಕಲರಿಗೂ ವಿಷಯಪ್ರಕಾಶಕನೂ, ಎಲ್ಲ ತತ್ತ್ವಾಭಿಮಾನಿದೇವತೆಗಳಿ-ಗುತ್ತಮನೂ ಅಂತೆಯೇ ಜೀವೋತ್ತಮನೂ ಮುಖ್ಯಪ್ರಾಣ ಎಂಬುದಾಗಿ ತಾವು ತಿಳಿಸಿದ್ದೀರಿ. ಇಂತಹಾ ಮಹಾಮಹಿಮೋಪೇತನಾದ ಪ್ರಾಣನಿಗೆ ಭಗವಂತನಿಂದಲಾದರೂ ಉತ್ಪತ್ತಿ ಹೇಳುವುದು ಹೇಗೆ? ಈ ಮುಖ್ಯಪ್ರಾಣ ಜೀವನ ಶರೀರದಲ್ಲಿ ಹೇಗೆ ಪ್ರವೇಶ ಮಾಡುತ್ತಾನೆ? ತನ್ನನ್ನು ತಾನು ವಿಭಾಗಮಾಡಿಕೊಂಡು ಇರುವುದಾದರೇ ಆ ವಿಭಾಗಗಳಾವು? ಆ ರೂಪಗಳ ಕಾರ್ಯ ಏನು? ಶರೀರದಲ್ಲಿ ಅವುಗಳ ಸ್ಥಾನ ಯಾವದು? ಪ್ರಾಣ ಯಾವ ಮಾರ್ಗದಿಂದ ಉತ್ಕ್ರಮಿಸುತ್ತಾನೆ? ಬಾಹ್ಯ ಪದಾರ್ಥಗಳನ್ನು, ದೇಹದ ಒಳಗಿರುವ ಪದಾರ್ಥಗಳನ್ನು ಧಾರಣೆ ಮಾಡುವ ಬಗೆ ಹೇಗೆ? ಎಂದು.

ಪ್ರಶ್ನೆ ಕೇಳಿ ಸಂತುಷ್ಟರಾದ ಗುರುಗಳು ಶಿಷ್ಯನನ್ನು ಈ ರೀತಿ ಪ್ರಶಂಸಿಸಿ ನುಡಿದರು. ವೇದ, ವೇದಾಂಗಗಳಲ್ಲಿಯ ಸೂಕ್ಷ್ಮವಾದ ವಿಚಾರಗಳನ್ನರಿತವನು ನೀನು. ಹೀಗಾಗಿ ನಿನಗೆ ಇಂತಹ ಸಮೀಚೀನವಾದ ಪ್ರಶ್ನೆಗಳು ಬಂದಿವೆ. ಅವುಗಳಿಗೆ ಉತ್ತರ ನೀಡುತ್ತೇನೆ. ಸಾವಧಾನನಾಗಿ ಆಲಿಸು.

**ಪ್ರಾಣನ ಉತ್ಪತ್ತಿ**

ಮೊದಲು ಇದನ್ನು ಅವಶ್ಯವಾಗಿ ತಿಳಿದಿರಬೇಕು.

ವಾಯುದೇವರು ಮಹಾಮಹಿಮರು. ಸಂದೇಹವಿಲ್ಲ. ಆದರೇ ಅವರಿಗಿಂತಲೂ ಉತ್ತಮ ಪರಮಾತ್ಮ. ದೇಹಕ್ಕೆ ಅಧೀನವಾಗಿ ನೆರಳಿರುತ್ತದೆ. ಹಾಗೆ ಮುಖ್ಯಪ್ರಾಣನನ್ನೊಳಗೊಂಡ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಪರಮಾತ್ಮನ ಅಧೀನವಾಗಿದೆ. ಹೀಗಾಗಿ ಪರಮಾತ್ಮನಿಂದ ಪ್ರಾಣೋತ್ಪತ್ತಿಯಾಗುವಲ್ಲಿ ಅನೌಚಿತ್ಯವೇನೂ ಇಲ್ಲ.

**ಪ್ರಾಣನ ಶರೀರ ಪ್ರವೇಶ ಹಾಗು ಪಂಚರೂಪಗಳು–**

ಭಗವಂತನ ಪ್ರೇರಣೆಯಿಂದ ಈ ವಾಯುದೇವರು ಶರೀರದಲ್ಲಿ ಪ್ರವೇಶಮಾಡುತ್ತಾರೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ರೂಪಗಳನ್ನು ಸ್ವೀಕರಿಸಿ ಶರೀರದಲ್ಲಿ ಎಲ್ಲ ವ್ಯಾಪಾರಗಳನ್ನು ಮಾಡುತ್ತಾರೆ. ಇದಲ್ಲದೆ ದಾಸಪ್ರಾಣನ ಪಂಚರೂಪಗಳೂ ಶರೀರದಲ್ಲಿವೆ. ಮುಖ್ಯಪ್ರಾಣನ ಮಗ ದಾಸಪ್ರಾಣ. ಈ ದಾಸಪ್ರಾಣನ ಪಂಚರೂಪಗಳಲ್ಲಿ ತತ್ತನ್ನಾಮಗಳಿಂದ ಸನ್ನಿಹಿತನಾಗಿ ಅವರಿಗೆ ನಿಯಾಮಕನಾಗಿದ್ದಾನೆ ಮುಖ್ಯಪ್ರಾಣ. ಹೀಗೆ ಎರಡು ತರಹದ ಪ್ರಾಣಾಪಾನಾದಿ ರೂಪಗಳಿಲ್ಲಿ ಪ್ರಸಕ್ತವಾಗಿವೆ.

**ಪಂಚರೂಪಗಳ ಕಾರ್ಯ**

ಚಕ್ರವರ್ತಿಯಾದ ರಾಜ ತನ್ನ ಮಕ್ಕಳಿಗೆ ಆಯಾ ರಾಜ್ಯಗಳನ್ನು ಕೊಟ್ಟು ಪ್ರಜಾಪಾಲನೆ ಮಾಡಿಸುತ್ತಾನೆ. ಹಾಗೆಯೇ ಮುಖ್ಯಪ್ರಾಣ ದಾಸಪ್ರಾಣರಿಗೆ ಆಯಾ ಸ್ಥಾನಗಳನ್ನು ಕೊಟ್ಟು ಸಕಲ ವ್ಯಾಪಾರಗಳನ್ನೂ ಮಾಡಿಸುತ್ತಾನೆ.

ಪಾಯು ಹಾಗೂ ಉಪಸ್ಥ ಮಲ, ಮೂತ್ರಗಳನ್ನು ವಿಸರ್ಜನೆ ಮಾಡುವ ಇಂದ್ರಿಯಗಳು. ಈ ಸ್ಥಾನದಲ್ಲಿ ಅಪಾನನನ್ನಿಟ್ಟಿದ್ದಾನೆ. ಮಲಾದಿಗಳನ್ನು ಅಪನಯನ (ಹೊರಗೆ ಹಾಕುವದು) ಮಾಡುವುದರಿಂದ ಇವನು ''ಅಪಾನ''ನಾಮಕನಾಗಿದ್ದಾನೆ. ಮುಖ್ಯಪ್ರಾಣರು ತಾವು ಅಪಾನರೂಪದಿಂದ ಅಲ್ಲಿ ನೆಲೆಗೊಂಡಿದ್ದಾರೆ.

ಶ್ವಾಸಾದಿಗಳನ್ನು ಪ್ರಣಯನ ಮಾಡುತ್ತಾರಾದ್ದರಿಂದ ವಾಯುವಿನ ಮತ್ತೊಂದು ರೂಪವನ್ನು "ಪ್ರಾಣ" ಎಂದು ವ್ಯವಹರಿಸುತ್ತಾರೆ. ಪ್ರಾಣನಾಮಕರಾಗಿ ಇವನಲ್ಲಿ ಸನ್ನಿಹಿತರಾದ ವಾಯುದೇವರೇ ಈ ಎಲ್ಲ ಕಾರ್ಯಗಳನ್ನು ಮಾಡಿಸುತ್ತಾರೆ. ಮುಖ, ನಾಸಿಕಾ, ಚಕ್ಷು, ಶ್ರೋತ್ರ ಎಂಬ ನಾಲಕು ಸ್ಥಾನಗಳಲ್ಲಿ ಇವರಿಬ್ಬರು ಸನ್ನಿಹಿತರಾಗಿದ್ದಾರೆ.

ಅಪಾನ ಹಾಗೂ ಪ್ರಾಣ ಇವುಗಳಲ್ಲಿಯ ಮಧ್ಯಭಾಗದಲ್ಲಿ (ನಾಭಿಯಲ್ಲಿ) ಸಮಾನನನ್ನಿಟ್ಟು ಅಲ್ಲಿ ಸಮಾನನಾಮಕರಾಗಿದ್ದಾರೆ ಮುಖ್ಯಪ್ರಾಣರು. ನಾವು ತಿಂದ ಅನ್ನವನ್ನು ವಿಭಾಗಮಾಡಿ ಎಲ್ಲ ಇಂದ್ರಿಯಗಳಿಗೆ ಸಮಾನವಾಗಿ ತಲುಪಿಸುತ್ತಾರೆ. ಆದ್ದರಿಂದ ಇವರಿಗೆ "ಸಮಾನ" ಎಂದು ನಾಮವಿದೆ. ಈ ಸಮಾನನ ಅನುಗ್ರಹದಿಂದಲೇ ನಮ್ಮ ಸಪ್ತೇಂದ್ರಿಯಗಳು ತಮ್ಮ ತಮ್ಮ ವ್ಯಾಪಾರಗಳನ್ನು ಸರಿಯಾಗಿ ಮಾಡುತ್ತವೆ. ಇಲ್ಲದಿದ್ದರೆ ಇಲ್ಲ.

ನಿಜವಾಗಿ ನಾವೆಲ್ಲರೂ ಜ್ಞಾನಸ್ವರೂಪರಾಗಿದ್ದೇವೆ. ನೇರವಾಗಿಯೇ ನಮಗೂ ವಿಷಯಗಳಿಗೂ ಸಂಪರ್ಕವಾಗುತ್ತದೆ. ಮಧ್ಯದಲ್ಲಿ ಇಂದ್ರಿಯಗಳು ಬೇಕಿಲ್ಲ. ಆ ಇಂದ್ರಿಯಗಳ ಪೋಷಣೆಗೆ ಸಮಾನನೂ ಬೇಕಿಲ್ಲ. ನಿಜ. ಆದರೇ ಆತ್ಮನಿರುವುದು ಹೃದಯದಲ್ಲಿ. ಹೃದಯನಿಹಿತನಾದ ಆತ್ಮನಿಗೂ ವಿಷಯಗಳಿಗೂ ನೇರವಾದ ಸಂಪರ್ಕವಿಲ್ಲ. ವಿಷಯಸಂಪರ್ಕಕ್ಕಾಗಿ ಇಂದ್ರಿಯಗಳು ಆವಶ್ಯಕ. ಅವುಗಳ ಪೋಷಣೆ ಸಮಾನನ ಅನುಗ್ರಹದಿಂದಲೇ ಸಾಧ್ಯ.

ಶರೀರದಲ್ಲಿ ನೂರ ಒಂದು ಪ್ರಧಾನ ನಾಡೀಗಳಿವೆ. ಅವುಗಳಲ್ಲಿ ಒಂದೊಂದಕ್ಕೆ ನೂರರಂತೆ ಉಪನಾಡೀಗಳು. ಸೇರಿ ಹತ್ತು ಸಾವಿರದ ಒಂದು ನೂರು ನಾಡೀಗಳು. ಇವುಗಳಲ್ಲಿಯ ಹತ್ತುಸಾವಿರನಾಡೀಗಳಿಗೆ ಒಂದೊಂದಕ್ಕೆ ಏಳರಂತೆ ಉಪನಾಡೀಗಳಿವೆ. ಕೂಡಿ ಎಪ್ಪತ್ತು ಸಾವಿರವಾದವು. ಮೇಲಿನ ನೂರು ನಾಡೀಗಳಲ್ಲಿ ಒಂದೊಂದಕ್ಕೆ ಇಪ್ಪತ್ತರಂತೆ ಉಪನಾಡೀಗಳಿವೆ. ಇವುಗಳ ಮೊತ್ತ ಎರಡು ಸಾವಿರ. ಹೀಗೆ ಒಟ್ಟು ಮೊತ್ತ ಎಪ್ಪತ್ತೆರಡುಸಾವಿರ. ಈ ವಿವಿಧ ನಾಡೀಗಳಲ್ಲಿ ಸಂಚಾರಮಾಡುತ್ತಾರಾದ್ದರಿಂದ ವಾಯುವಿನ ರೂಪಕ್ಕೆ "ವ್ಯಾನ" ಎಂದು ಹೆಸರಿದೆ. ಈ ವ್ಯಾನನಿಗೆ ನಿಯಾಮಕರಾದವರು ಮುಖ್ಯಪ್ರಾಣರು.

### ಪ್ರಾಣನ ಉತ್ಕ್ರಮಣ

ಪುಣ್ಯಮಾಡಿದ ಜೀವರಾಶಿಗಳನ್ನು ಸುಖಪ್ರಚುರವಾದ ಊರ್ಧ್ವಲೋಕಳಿಗೆ ತಲುಪಿಸುತ್ತಾನಾದ್ದರಿಂದ ವಾಯುದೇವರ ಮತ್ತೊಂದು ರೂಪ "ಉದಾನ"ವೆನಿಸಿದೆ. ಶರೀರದ ಮಧ್ಯದಲ್ಲಿರುವ ಅತಿಪ್ರಧಾನವಾದ ನಾಡೀ ಸುಷುಮ್ನಾ. ಈ ನಾಡೀಯಿಂದಲೇ ಅಪರೋಕ್ಷಜ್ಞಾನಿಯನ್ನು ಮೊಕ್ಷ ಕೊಡುವುದಕ್ಕಾಗಿ ಸತ್ಯ ಲೊಕಕ್ಕೆ ಕರೆದೊಯ್ಯುವವರು ಮುಖ್ಯಪ್ರಾಣರು. ಇವರೂ ಉದಾನನಾಮಕರಾಗಿದ್ದಾರೆ.

## ಬಾಹ್ಯಾಂತರ ಧಾರಕತ್ವ

ಪ್ರಾಣನಾಮಕರಾದ ವಾಯುದೇವರು ಬಾಹ್ಯದಲ್ಲಿ ಆದಿತ್ಯನಾಮಕರಾಗಿ ಆದಿತ್ಯನಲ್ಲಿದ್ದು ಅವನಿಗೆ ನಿಯಾಮಕರಾಗಿದ್ದಾರೆ. ಶರೀರದಲ್ಲಿ ತನಗೆ ಅಧಿಷ್ಠಾನನಾದ ಆದಿತ್ಯನ ಜೊತೆಗೆ ಕಣ್ಣಿನಲ್ಲಿದ್ದು ನಿಯಾಮಕರಾಗಿದ್ದಾರೆ.

ಪೃಥಿವಿಯನ್ನು ನಿಯಮನ ಮಾಡುವದಕ್ಕಾಗಿ ಬಾಹ್ಯದಲ್ಲಿ ಅಪಾನನಾಮಕರಾಗಿದ್ದಾರೆ. ದೇಹದ ಒಳಗೆ ದಾಸನಾದ ಅಪಾನನ್ನು ನಿಯಮನ ಮಾಡುತ್ತಾ ಸನ್ನಿಹಿತರಾಗಿದ್ದಾರೆ.

ಬಾಹ್ಯದಲ್ಲಿ ಭೂತಾಕಾಶಕ್ಕೆ ನಿಯಾಮಕರಾದವರು ಸಮಾನರು. ಇವರು ದೇಹದ ಮಧ್ಯದಲ್ಲಿರುವ ಆಕಾಶದಲ್ಲಿ ಸ್ವದಾಸನಾದ ಸಮಾನನನ್ನಿಟ್ಟು ನಿಯಾಮಕರಾಗಿದ್ದಾರೆ.

ಬಾಹ್ಯದಲ್ಲಿ ತೇಜಸ್ಸನ್ನು ನಿಯಮನೆ ಮಾಡುವವರು ಉದಾನವಾಯುದೇವರು. ಅವರೇ ನಮ್ಮ ದೇಹದಲ್ಲಿ ತೇಜಸ್ಸನ್ನು, ಅದರಲ್ಲಿ ದಾಸನಾದ ಉದಾನನನ್ನಿಟ್ಟು ನಿಯಮನೆ ಮಾಡುತ್ತಾರೆ. ಇಂತಹಾ ಉದಾನವಾಯು ದೇಹದಿಂದ ಉತ್ಕ್ರಾಂತರಾದಾಗ ತೇಜಸ್ಸು ಉಪಶಾಂತವಾಗುತ್ತದೆ. ಆವಾಗಲೇ ಜೀವರ ಮರಣ ದೃಢವಾಗುತ್ತದೆ.

ಪ್ರಾಣಿಯು ದೇಹವನ್ನು ತ್ಯಜಿಸುತ್ತಾ ಹೃದಯದಲ್ಲಿ ವಿಷಯಗಳನ್ನು ನೆನೆಯುತ್ತಿರುತ್ತಾನೆ. ಹಾಗೆ ಆ ನೆನಪುಗಳನ್ನು ಹೊತ್ತುಕೊಂಡೇ ಉದಾನನ ಹತ್ತಿರ ಬರುತ್ತಾನೆ. ಪ್ರಾಣಿ ಸ್ಮರಿಸಿದ ಲೋಕಗಳನ್ನು, ದೇಹಗಳನ್ನು ಉದಾನನು ಒದಗಿಸಿಕೊಡುತ್ತಾನೆ.

ಹೀಗೆ ಪ್ರಾಣದೇವರು ಪರಮಾತ್ಮನಿಂದ ಜನಿಸಿದ್ದಾರೆ. ಅವನ ಪ್ರೇರಣೆಯಿಂದ ಶರೀರದಲ್ಲಿ ಪ್ರವೇಶಮಾಡುತ್ತಾರೆ. ಪಾಯೂಪಸ್ಥಾದಿಸ್ಥಾನಗಳನ್ನು ಪ್ರಾಣಾದಿಪಂಚರೂಪಗಳಿಂದ ತುಂಬಿಕೊಂಡಿದ್ದಾರೆ. ಎಲ್ಲದಕ್ಕೂ ಸ್ವಾಮಿಯಾಗಿದ್ದಾರೆ. ಬಾಹ್ಯ, ಆಂತರ ಪದಾರ್ಥಗಳನ್ನು ಧಾರಣೆ ಮಾಡುತ್ತಾರೆ. ಕೊನೆಗೆ ದೇಹದಿಂದ ಉತ್ಕ್ರಾಂತರಾಗಿ ಜೀವರ ಕರ್ಮಾನುಸಾರ ಲೋಕಪ್ರಾಪಕರೂ ಆಗಿದ್ದಾರೆ. ಈ ಪರಿಯ ಪ್ರಾಣನ ಮಹಿಮೆನ್ನರಿತವನ ವಂಶ ಅಭಿವೃದ್ಧವಾಗುತ್ತದೆ. ಕೊನೆಗೆ ಸ್ವಯಂ ತಾನು ಮುಕ್ತನಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ.

## ಚತುರ್ಥ ಪ್ರಶ್ನೆ

ಆಮೇಲೆ ಸೌರ್ಯಾಯಣೀ ಗಾರ್ಗ್ಯ ಗುರುಗಳ ಬಳಿ ಬಂದು ಪ್ರಶ್ನಿಸಿದ. ಭಗವನ್ ಜೀವನ ಸಕಲ ವ್ಯಾಪಾರಗಳನ್ನು ತತ್ತ್ವಾಭಿಮಾನಿಗಳಾದ ದೇವತೆಗಳು ಮಾಡಿಸುತ್ತಾರೆಂಬುದು ಸಿದ್ಧ. ಆದರೇ ಇದು ಜಾಗರದಲ್ಲಿ ಹೇಳಬಹುದು. ಜೀವನು ವಿಶ್ರಾಂತನಾದಾಗ ಈ ದೇವತೆಗಳೆಲ್ಲರಿಗೂ ಎಚ್ಚರವೋ? ವಿಶ್ರಾಂತಿಯೋ? ಎಲ್ಲ ದೇವತೆಗಳಿಗೂ ವಿಶ್ರಾಂತಿಯನ್ನು

ಹೇಳಿದಲ್ಲಿ ಜೀವನ ವ್ಯಾಪಾರಗಳೆಲ್ಲ ನಿಂತು ಹೋಗುವದರಿಂದ ಜೀವನು ಮೃತನಾಗ ಬೇಕಾದೀತು. ಜೀವನ ವ್ಯಾಪಾರಗಳನ್ನು ಉಪಪಾದಿಸುವದಕ್ಕಾಗಿ ದೇವತೆಗಳಿಗೆ ಜಾಗರವನ್ನು ಕಲ್ಪಿಸಿದರೆ ನಿದ್ರೆಯೇ ಇಲ್ಲದಂತಾಗುತ್ತದೆ. ಆದ್ದರಿಂದ ಕೆಲವರಿಗೆ ಜಾಗರವನ್ನು ಹಲವರಿಗೆ ವಿಶ್ರಾಂತಿಯನ್ನು ಹೇಳಿ ತೀರಬೇಕು. ಹಾಗಾದಲ್ಲಿ ಮಲಗುವ ದೇವತೆಗಳಾರು? ಎಚ್ಚರ ವಿರುವವರಾರು? ಸ್ವಪ್ನದಲ್ಲಿ ಪದಾರ್ಥಗಳನ್ನು ತೋರಿಸುವವರಾರು? ಸುಷುಪ್ತಿಯಲ್ಲಿ ಯಾರ ಅನುಗ್ರಹದಿಂದ ಸುಖವಾಗುತ್ತದೆ? ಇವರೆಲ್ಲರು ಯಾರನ್ನಾಶ್ರಯಿಸಿದ್ದಾರೆ? ಎಲ್ಲರಿಗೂ ಮುಖ್ಯಪ್ರಾಣನೇ ಆಶ್ರಯ ಎಂಬುದು ಸರಿಯಲ್ಲ. ಅವರೂ ಅಸ್ವತಂತ್ರರೇ. ಹೀಗಾಗಿ ಅವರಿಗೂ ಆಶ್ರಯ ಯಾರಾಗಿರಬಹುದು? ಎಂದು.

ಮೊದಲು ಈ ವಿಷಯ ಅಜ್ಞಜನರಿಗೂ ತಿಳಿಯಾಗಿ ತಿಳಿಯುವಂತೆ ದೃಷ್ಟಾಂತಪೂರ್ವಕವಾಗಿ ಪಿಪ್ಪಲಾದರು ಉತ್ತರಿಸುತ್ತಿದ್ದಾರೆ.

ಸೂರ್ಯ ಉದಯಿಸುವಾಗ ಕಿರಣಗಳೆಲ್ಲ ಮಂಡಲದಿಂದ ಹೊರಬರುತ್ತವೆ. ತಾನು ಅಸ್ತಮಿಸುವಾಗ ಸೂರ್ಯನಲ್ಲಿಯೇ ಸೇರುತ್ತವೆ. ಹಾಗೆ ಜೀವನ ಜಾಗರದಲ್ಲಿ ದೇವತೆಗಳೆಲ್ಲ ಮನಸ್ಸಿನಲ್ಲಿರುವ ಮನೋನಾಮಕನಾದ ಪರಮಾತ್ಮನಿಂದ ಹೊರಬಂದು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ. ಸ್ವಪ್ನಾವಸ್ಥೆಯಲ್ಲಿ ಮನಸ್ಸಿನ ಅಂತರ್ಯಾಮಿಯಾದ ಪರಮಾತ್ಮನಲ್ಲೇ ಲೀನರಾಗುತ್ತಾರೆ. ಆದ್ದರಿಂದ ಆಯಾ ದೇವತೆಗಳಿಂದ ಅಭಿಮನ್ಯಮಾನವಾದ ಇಂದ್ರಿಯಗಳು ಸಹ ಉಪರತವಾಗಿರುತ್ತವೆ. ಕಾರಣ ಬಾಹ್ಯೇಂದ್ರಿಯಗಳಿಂದ ಯಾವ ವ್ಯಾಪಾರಗಳನ್ನೂ ಜೀವ ಮಾಡಲಾರ. ಆದರೆ ಸ್ವಪ್ನಾವಸ್ಥೆಯಲ್ಲಿ ಮನಸ್ಸಿಗೆ ಉಪರತಿ ಇಲ್ಲ. ಇಂತಹ ಮನಸ್ಸಿಗೆ ನಿಯಾಮಕರು ರುದ್ರದೇವರು. ಈ ಮನಸ್ಸಿನಿಂದಲೇ ಸ್ವಾಪ್ನಪದಾರ್ಥಗಳನ್ನು ಜೀವ ಕಾಣುತ್ತಾನೆ. ಸುಷುಪ್ತಿ ಅವಸ್ಥೆಯಲ್ಲಿ ಹೃದಯದಲ್ಲಿರುವ ಪರಮಾತ್ಮನಲ್ಲಿ ದೇವತೆಗಳೆಲ್ಲ ಲೀನರಾಗುತ್ತಾರೆ. ಇದು ಸತ್ಯ. ಆವಾಗ ಮನಸ್ಸು ಕೂಡಾ ಉಪರತವಾಗಿರುತ್ತದೆ. ಆದ್ದರಿಂದ ಯಾವ ಕೆಲಸವನ್ನೂ ಜೀವ ಮಾಡಲಾರ.

ಹೀಗೆ ಜೀವ, ಇಂದ್ರಿಯಗಳು, ತತ್ತ್ವಾಭಿಮಾನಿದೇವತೆಗಳು ಉಪರತರಾದಾಗ ಪ್ರಾಣದೇವರು ಮಾತ್ರ ಎಚ್ಚರದಿಂದಿದ್ದು ಶ್ವಾಸಾದಿವ್ಯಾಪಾರಗಳನ್ನು ಮಾಡುತ್ತಾ ಪ್ರಾಣಿಗಳಿಗೆ ಸಂರಕ್ಷಕರಾಗಿರುತ್ತಾರೆ. ಇಂತಹ ವಾಯುದೇವರ ಪ್ರಾಣ, ಅಪಾನ, ವ್ಯಾನರೂಪಗಳನ್ನು ಅಗ್ನಿ ಎಂದು ಇಲ್ಲಿ ವ್ಯವಹರಿಸಿದ್ದಾರೆ. ಆದ್ದರಿಂದ ಇವರು ಪ್ರಾಣಾಗ್ನಿಶಬ್ದವಾಚ್ಯರು. ಉದಾನ ಹಾಗು ಸಮಾನರು ಋತ್ವಿಜರು. .

ಇವುಗಳಲ್ಲಿ ಅಪಾನ "ಗಾರ್ಹಪತ್ಯ" ಎನಿಸುತ್ತಾನೆ. ಏಕೆಂದರೆ ಪ್ರಧಾನವಾದ ಹೋಮವನ್ನು ಮಾಡುವದು ಆಹವನೀಯಾಗ್ನಿಯಲ್ಲಿ. ಈ ಆಹವನೀಯಾಗ್ನಿಗೆ ಪಶ್ಚಿಮದಲ್ಲಿ ಅಂದರೆ

ಹಿಂಭಾಗದಲ್ಲಿರುತ್ತದೆ ಗಾರ್ಹಪತ್ಯಾಗ್ನಿ. ಹೀಗೆ ಪ್ರಾಣನಿರುವದು ಮುಖದಲ್ಲಿ. ಅದರ ಹಿಂಭಾಗವಾದ ಗುದದ್ವಾರದಲ್ಲಿ ಅಪಾನನಿರುತ್ತಾನೆ. ಹೀಗೆ ಪಶ್ಚಿಮತ್ವ ಸಮಾನವಾದುದರಿಂದ ಅಪಾನ ಗಾರ್ಹಪತ್ಯಾಗ್ನಿ.

ವ್ಯಾನನು ''ದಕ್ಷಿಣಾಗ್ನಿ''. ಈ ದಕ್ಷಿಣಾಗ್ನಿಯನ್ನು ''ಅನ್ವಾಹಾರ್ಯಪಚನ'' ಎಂದೂ ವ್ಯವಹಾರಿಸುತ್ತಾರೆ. ಈ ದಕ್ಷಿಣಾಗ್ನಿಯಲ್ಲಿ ಹೋಮವಿಶೇಷವನ್ನು ಮಾಡುವದರಿಂದ ಹೋಮಕ್ಕೆ ಅಂಗವಾಗಿದೆ. ಹಾಗೆಯೇ ಶ್ವಾಸರೂಪವಾದ ಆಹುತಿಗಳನ್ನು ಶರೀರದ ಎಲ್ಲ ನಾಡಿಗಳಿಗೂ ತಲುಪಿಸುತ್ತಾನೆ ವ್ಯಾನ. ಹೀಗೆ ವ್ಯಾನನೂ ಶ್ವಾಸರೂಪವಾದ ಹೊಮಕ್ಕೆ ಅಂಗನಾಗಿದ್ದಾನೆ. ದಕ್ಷಿಣಾಗ್ನಿಯಲ್ಲಿ ಇರುವ ಹೋಮಾಂಗತ್ವವು ವ್ಯಾನನಲ್ಲಿಯೂ ಇರುವದರಿಂದ ವ್ಯಾನ ಅನ್ವಾಹಾರ್ಯಪಚನ ಎಂದು ತಿಳಿಯಬೇಕು.

ಪ್ರಾಣನನ್ನು ''ಆಹವನೀಯಾಗ್ನಿ'' ಎಂದು ತಿಳಿಯಬೇಕು. ಗಾರ್ಹಪತ್ಯದಿಂದ ವಿಭಾಗ ಮಾಡಿ ಅಗ್ನಿಯನ್ನು ತಂದು ಆವಹನೀಯದಲ್ಲಿರಿಸುತ್ತೇವೆ. ಇದೇ ಪ್ರಣಯನ. ಹಾಗೆ ಅಪಾನರೂಪವಾದ ಮುಖ್ಯಪ್ರಾಣನಿಂದ ವಿಭಕ್ತವಾದ ಶ್ವಾಸರೂಪವಾದ ವಾಯುವು ಪ್ರಾಣನಲ್ಲಿ ಪ್ರಣೀತವಾಗುತ್ತದೆ. (ಸೇರುತ್ತದೆ) ಹೀಗೆ ಆಹವನೀಯದಲ್ಲಿರುವ ಪ್ರಣಯನ ಪ್ರಾಣನಲ್ಲಿಯೂ ಇದೆ. ಆದ್ದರಿಂದ ಪ್ರಾಣ ಆಹವನೀಯ ಎಂದು ಹೇಳುತ್ತಾರೆ.

ಇಲ್ಲಿ ಗಮನಿಸಬೇಕಾದ ಅಂಶವಿಶೇಷವಿದೆ. ದಕ್ಷಿಣಾಗ್ನಿಯೂ ಗಾರ್ಹಪತ್ಯದಿಂದ ವಿಭಕ್ತವಾದದ್ದೇ. ಆದ್ದರಿಂದ ಪ್ರಣಯನ (ಗಾರ್ಹಪತ್ಯದಿಂದ ತಂದು ಹಾಕುವದು) ಆಹವನೀಯದಲ್ಲಿರುವಂತೆ ದಕ್ಷಿಣಾಗ್ನಿಯಲ್ಲಿಯೂ ಇದೆ. ನಿಜ. ಆದರೆ ಗಾರ್ಹಪತ್ಯದಲ್ಲಿಯ ಅಗ್ನಿಯನ್ನು ತಂದು ದಕ್ಷಿಣಾಗ್ನಿಯ ಕುಂಡದಲ್ಲಿ ಹಾಕಿದ ಮೇಲೆ ಪ್ರಜ್ವಲನ ಮಾಡುತ್ತಾರೆ. ಇದಕ್ಕೆ ವಿಪರೀತವಾಗಿ ಗಾರ್ಹಪತ್ಯದಿಂದ ಪ್ರಜ್ವಲಿತವಾದ ಅಗ್ನಿಯನ್ನೆ ತಂದು ಆಹವನೀಯದಲ್ಲಿ ಹಾಕುತ್ತಾರೆ. ಇದೆ ಮುಖ್ಯವಾದ ಪ್ರಣಯನ. ಆದ್ದರಿಂದ ಪ್ರಾಣನನ್ನು ಆಹವನೀಯ ಎಂದು ಕರೆಯಬೇಕೋ ಅನ್ವಾಹಾರ್ಯಪಚನ ಎಂದು ಕರೆಯಬೇಕೊ ಎಂಬ ಸಂದೇಹಕ್ಕೆ ಆಸ್ಪದವಿಲ್ಲ.

ಯಾವ ಯಾವ ಅಗ್ನಿಯಲ್ಲಿ ಎಷ್ಟೆಷ್ಟು ಆಹುತಿಗಳನ್ನು ಯಾವ ಯಾವ ದೇವತೆಗಳಿಗೆ ಹಾಕಬೇಕೆಂಬುದನ್ನು ನಿರ್ಧರಿಸುವವನು ಅಧ್ವರ್ಯು. ಸಮಾನನಾಮಕ ವಾಯುದೇವರು ಸಹ ಶ್ವಾಸೋಛ್ವಾಸರೂಪವಾದ ಆಹುತಿಗಳನ್ನು ಸ್ಥೂಲ, ಮಧ್ಯ, ಸೂಕ್ಷ್ಮ ನಾಡಿಗಳಿಗೆ ಅನುಗುಣವಾಗಿ ತಲುಪಿಸುತ್ತಾರಾದ್ದರಿಂದ ಸಮಾನರನ್ನು ''ಅಧ್ವರ್ಯು''ಗಳೆಂದು ಕರೆದಿದ್ದಾರೆ.

ಯಜ್ಞದ ಫಲವನ್ನು ಉದ್ಗಾನ ಮಾಡುವವನೆ ಉದ್ಗಾತಾ. ಈ ಉದ್ಗಾತಾ ಈ ಕರ್ಮಕ್ಕೆ ಇದು ಫಲ ಎಂದಿಷ್ಟೇ ತಿಳಿಸುತ್ತಾನೆ. ಆದರೆ ಉದಾನರು ನೇರವಾಗಿ ಇಷ್ಟಫಲವಾದ ಮೋಕ್ಷವನ್ನೇ ಕೊಟ್ಟುಬಿಡುತ್ತಾರೆ. ಆದ್ದರಿಂದ ಉದಾನನನ್ನು ''ಉದ್ಗಾತಾ'' ಎಂದು ಕರೆದಿದ್ದಾರೆ.

ಮನೋನಾಮಕನಾದ ಪರಮಾತ್ಮನ ಅನುಗ್ರಹದಿಂದಲೆ ಜೀವ ಸ್ವಾಪ್ನಪದಾರ್ಥಗಳನ್ನು ಕಾಣುತ್ತಾನೆ. ದೇವರ ಇಚ್ಛೆ ಇದ್ದಲ್ಲಿ ಮಹತ್ವವನ್ನು, ಇಚ್ಛೆ ಇಲ್ಲದಿದ್ದಲ್ಲಿ ನೀಚತ್ವವನ್ನನು ಭವಿಸುತ್ತಾನೆ. ಒಟ್ಟಾರೆ ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಅನುಭವಿದ್ದನ್ನೆ ಸ್ವಪ್ನದಲ್ಲಿ ಕಾಣುತ್ತಾನೆಯೇ ಹೊರತು ಸರ್ವಥಾ ಅನುಭವಿಸದೇ ಇದ್ದದ್ದು ಸ್ವಪ್ನದಲ್ಲಿ ತೊರುವದಿಲ್ಲ. ಹೀಗೆ ಸ್ವಪ್ನದಲ್ಲಿ ಜೀವನು ಏನೆಲ್ಲ ಪದಾರ್ಥಗಳನ್ನು ಅನುಭವಿಸುತ್ತಾನೆಯೋ ಇದನ್ನು ತೈಜಸ ನಾಮಕ ಪರಮಾತ್ಮನ ಪ್ರೇರಣೆಯಿಂದ ವಾಯುದೇವರು ನಮಗೆ ತೊರಿಸುತ್ತಾರೆ.

ಸುಷುಪ್ತಿಯಲ್ಲಿ ಮನಸ್ಸಿನ ಕಾರ್ಯವೂ ಸ್ಥಗಿತಗೊಳ್ಳುತ್ತದೆ. ಆಗ ಜೀವ ತೈಜಸನನ್ನು ಬಿಟ್ಟು ಪ್ರಾಜ್ಞನನ್ನು ಸೇರಿರುತ್ತಾನೆ. ಈ ಸುಷುಪ್ತ್ಯವಸ್ಥೆಯಲ್ಲಿ ಜೀವ ಸ್ವಾಪ್ನ ಪದಾರ್ಥಗಳನ್ನು ನೋಡಲಾರ. ಆಗ ಸಾತ್ತ್ವಿಕರು ಹಾಗು ರಾಜಸರು ಪರಮಾತ್ಮನ ಸಾಮರ್ಥ್ಯದಿಂದ ಉದ್ಭೂತವಾದ ಸ್ವರೂಪಸುಖವನ್ನನುಭವಿಸುತ್ತಾರೆ. ತಾಮಸರ ಸ್ವರೂಪದಲ್ಲಿ ಸುಖವಿಲ್ಲದ ಕಾರಣ ಅವರಿಗೆ ಪರಮಾತ್ಮ ತನ್ನ ಆಲಿಂಗನದಿಂದ ಸುಖವನ್ನು ಕೊಡುತ್ತಾನೆ. ಇದು ಭಗವಂತನ ದಯೆಗೆ ದ್ಯೋತಕವಾಗಿದೆ.

ಪಕ್ಷಿಗಳೆಲ್ಲ ತಾವು ವಾಸಿಸುವ ವೃಕ್ಷವನ್ನೇ ಆಶ್ರಯಿಸಿ ಇರುತ್ತವೆ. ಹಾಗೆ ಪಂಚ ಮಹಾಭೂತಗಳು, ಪಂಚ ತನ್ಮಾತ್ರಾಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ತದ್ವಿಷಯಗಳು, ಪಂಚವಿಧವಾದ ಮನಸ್ಸು, ತದ್ವಿಷಯಗಳು ಹಾಗೂ ಎಲ್ಲವನ್ನು ಧಾರಣೆ ಮಾಡುವ ಮುಖ್ಯಪ್ರಾಣ ಹೀಗೆ ಸರ್ವಕ್ಕೂ ಪರಮಾತ್ಮನೇ ಸ್ವತಂತ್ರನಾಗಿ ಆಶ್ರಯನಾಗಿದ್ದಾನೆ.

ಸರ್ವಜ್ಞನಾದ ಪರಮಾತ್ಮ ಆಯಾ ದೇವತೆಗಳನ್ನು ಪ್ರೇರಿಸಿ ಸ್ವಯಂ ಅವರಲ್ಲಿ ಸನ್ನಿಹಿತನಾಗಿ ಚಕ್ಷುರಾದಿಗಳಿಗೆ ದರ್ಶನಾದಿಶಕ್ತಿಯನ್ನು ಕೊಡುತ್ತಾನೆ. ಪ್ರಾಕೃತರೂಪರಹಿತನಾದ ಅಪ್ರಾಕೃತಚಿನ್ಮಯಶರೀರನಾದ ಪರಮಾತ್ಮನನ್ನು ಅರಿತವನು ಸ್ವಯೋಗ್ಯವಾದ ಜ್ಞಾನದಿಂದ ಪೂರ್ಣನಾಗುತ್ತಾನೆ. ಅಲ್ಲದೆ ಪರಿಪೂರ್ಣನಾದ ಪರಮಾತ್ಮನನ್ನು ಸೇರಿ ಮೋಕ್ಷಸುಖ ವನ್ನನುಭವಿಸುತ್ತಾನೆ.

## ಪಂಚಮ ಪ್ರಶ್ನೆ

ನಂತರ ಶೈಬ್ಯ ಸತ್ಯಕಾಮ ಗುರುಗಳ ಸನಿಹ ಸೇರಿ ಕೇಳಿದ. ''ಭಗವನ್ ಮನುಷ್ಯ ದೇಹತ್ಯಾಗ ಮಾಡುವವರೆಗೂ ಪ್ರಣವಮಂತ್ರದಿಂದ ಪರಮಾತ್ಮನ ಉಪಾಸನೆಯನ್ನು ಮಾಡಬೇಕೆಂದು ಶಾಸ್ತ್ರಗಳೆಲ್ಲ ಸಾರುತ್ತವೆ. ಹಾಗೆ ಉಪಾಸನೆ ಮಾಡುವದರಿಂದ ಪುರುಷನಿಗಾಗುವ ಗತಿ ಏನು? ಎಂಬುದನ್ನು ತಿಳಿಸಿರಿ'' ಎಂದು.

ಹೀಗೆ ಕೇಳಿದ ಸತ್ಯಕಾಮನಿಗೆ ಪಿಪ್ಪಲಾದರು ಹೇಳಿದರು.

ಪ್ರಣವವು ಮುಖ್ಯವಾಗಿ ಪರಬ್ರಹ್ಮ ಪ್ರತಿಪಾದಕವಾಗಿದೆ. ಅಮುಖ್ಯವಾಗಿ ಚತುರ್ಮುಖನನ್ನೂ ತಿಳಿಸುತ್ತದೆ. ಇದಕ್ಕೆ ದೃಷ್ಟಾಂತ. ಗಂಗಾ ಶಬ್ದದ ಮುಖ್ಯಾರ್ಥ ಪ್ರವಾಹ. ಈ ಪ್ರವಾಹದ ವಿಶೇಷವಾದ ಸಂಬಂಧ ಇದ್ದುದರಿಂದ ತೀರವನ್ನೂ ಪ್ರವಾಹ ವಾಚಕವಾದ ಗಂಗಾಶಬ್ದದಿಂದ ವ್ಯವಹರಿಸುತ್ತಾರೆ. ಹಾಗೆ ಪ್ರಣವವಾಚ್ಯನಾದ ಪರಬ್ರಹ್ಮನ ಪರಿಪೂರ್ಣವಾದ ಸನ್ನಿಧಾನ ಚತುರ್ಮುಖನಲ್ಲಿ ಇದೆ. ಆದ್ದರಿಂದ ಪ್ರಣವವು ಚತುರ್ಮುಖನನ್ನೂ ಅಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆ. ಹೀಗೆ ಪ್ರಣವ ಮಂತ್ರದಿಂದ ವೈಕುಂಠಾದಿಲೋಕಗಳಲ್ಲಿರುವ ಪರಬ್ರಹ್ಮನನ್ನು, ಚತುರ್ಮುಖನಲ್ಲಿ ಅಧಿಷ್ಠಿತನಾದ ಅಪರಬ್ರಹ್ಮನನ್ನು ಉಪಾಸನೆ ಮಾಡಿದ ಪುರುಷ ಇವರಿಬ್ಬರಲ್ಲೊಬ್ಬರಾದ ಚತುರ್ಮುಖನನ್ನು ಮೊದಲು ಹೊಂದಿ ಅವನ ಉಪದೇಶದಿಂದ ಪರಬ್ರಹ್ಮನನ್ನು ಸೇರುತ್ತಾನೆ.

ಓಂಕಾರದಲ್ಲಿ ಮೂರಕ್ಷರಗಳಿವೆ. ವಿಶ್ವ, ತೈಜಸ, ಪ್ರಾಜ್ಞ ತ್ರ್ಯಕ್ಷರಪ್ರತಿಪಾದ್ಯವಾದ ರೂಪಗಳು. ಯಾವ ಸಾಧಕನು ಈ ಮೂರು ಅಕ್ಷರಗಳಲ್ಲಿಯ ಯಾವದೋ ಒಂದು ಅಕ್ಷರದಿಂದ ಪ್ರತಿಪಾದ್ಯನಾದ ಭಗವಂತನ ರೂಪವನ್ನು ಚೆನ್ನಾಗಿ ತಿಳಿದು ಉಪಾಸನೆ ಮಾಡುವನೋ ಅವನು ಸ್ವರ್ಗದಲ್ಲಿ ವಿಶಿಷ್ಟವಾದ ಸುಖವನ್ನು ಅನುಭವಿಸುತ್ತಾನೆ. ಋಗ್ವೇದಾಭಿಮಾನಿದೇವತೆಗಳ ಪ್ರಸಾದದಿಂದ ಮತ್ತೆ ಭೂಲೋಕದಲ್ಲಿ ಬ್ರಾಹ್ಮಣನಾಗಿ ಜನಿಸುತ್ತಾನೆ. ಹೇರಳವಾದ ವೈಭವದಿಂದ ಯುಕ್ತನಾಗುತ್ತಾನೆ. ಅಲ್ಲದೆ ಆಸ್ತಿಕ್ಯಬುದ್ಧಿಯುಕ್ತನಾಗಿ ಬ್ರಹ್ಮಚರ್ಯವನ್ನು ವಿಶೇಷವಾಗಿ ಪಾಲಿಸುತ್ತಾ ಎಲ್ಲ ಇಂದ್ರಿಯಗಳನ್ನು ನಿಗ್ರಹಿಸಿ ಪರಮಾತ್ಮನಲ್ಲಿ ತಲ್ಲೀನನಾಗುತ್ತಾನೆ.

ಯಾವದೇ ಎರಡು ಅಕ್ಷರಗಳಿಂದ ಪ್ರತಿಪಾದ್ಯವಾದ ಪರಮಾತ್ಮನ ರೂಪವನ್ನು ಚೆನ್ನಾಗಿ ತಿಳಿದು ಉಪಾಸನೆ ಮಾಡಿದ ಪುರುಷರು ಅಂತರಿಕ್ಷಲೋಕದಿಂದ ಚಂದ್ರಲೋಕಕ್ಕೆ ಹೋಗಿ ಸ್ವಸ್ವಯೋಗ್ಯವೈಭವವನ್ನನುಭವಿಸಿ ಮತ್ತೆ ಭೂಲೋಕ ಸೇರುತ್ತಾರೆ. ಇಲ್ಲಿಯೂ ಸುಖವನ್ನನುಭವಿಸುತ್ತಾ ವಿಶಿಷ್ಟವಾದ ಸಾಧನೆಯನ್ನು ಮಾಡುತ್ತಾರೆ. ಇದೆಲ್ಲವು ಯಜುರಭಿಮಾನಿಗಳಾದ ದೇವತೆಗಳಿಂದಲೇ ಸಾಧ್ಯವಾಗುತ್ತದೆ.

ಓಂಕಾರದಲ್ಲಿಯ ಮೂರೂ ಅಕ್ಷರದಿಂದ ಪ್ರತಿಪಾದ್ಯವಾದ ಪರಮಾತ್ಮನ ರೂಪಗಳನ್ನರಿತು ಉಪಾಸನೆ ಮಾಡಿದವರಿಗೆ ಅಪರೋಕ್ಷವು ಸಿದ್ಧಿಸುತ್ತದೆ. ಇವರನ್ನು ಸಾಮಾಭಿಮಾನಿಗಳಾದ ದೇವತೆಗಳು ಸೂರ್ಯಲೋಕಕ್ಕೆ ಕರೆದೊಯ್ಯುತ್ತಾರೆ. ಸರ್ಪವು ಪೊರೆಯನ್ನು ತ್ಯಜಿಸಿ ನವಚೈತನ್ಯವನ್ನು ಪಡೆದಂತೆ ಜ್ಞಾನಿಗಳು ಲಿಂಗದೇಹದಿಂದ ನಿರ್ಮುಕ್ತರಾಗಿ ಶುದ್ಧರಾಗಿ ಪರಬ್ರಹ್ಮನನ್ನು ಪಡೆಯುತ್ತಾರೆ. ಇದು ವಾಯುದೇವರ ಅನುಗ್ರಹದಿಂದಲೇ ಸಾಧ್ಯವಾಗುತ್ತದೆ. ಈ ವಿಷಯವನ್ನು ಪ್ರತಿಪಾದಿಸುವ ಪ್ರಮಾಣಗಳು ಸಾಕಷ್ಟಿವೆಯಾದ್ದರಿಂದ ಈ ತತ್ತ್ವದಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ.

ಮನೋನಾಮಕನಾದ ಪರಮಾತ್ಮನ ಅನುಗ್ರಹದಿಂದಲೆ ಜೀವ ಸ್ವಾಪ್ನಪದಾರ್ಥಗಳನ್ನು ಕಾಣುತ್ತಾನೆ. ದೇವರ ಇಚ್ಛೆ ಇದ್ದಲ್ಲಿ ಮಹತ್ವವನ್ನು, ಇಚ್ಛೆ ಇಲ್ಲದಿದ್ದಲ್ಲಿ ನೀಚತ್ವವನ್ನನು ಭವಿಸುತ್ತಾನೆ. ಒಟ್ಟಾರೆ ಈ ಜನ್ಮದಲ್ಲಿ ಅಥವಾ ಜನ್ಮಾಂತರದಲ್ಲಿ ಅನುಭವಿದ್ದನ್ನೆ ಸ್ವಪ್ನದಲ್ಲಿ ಕಾಣುತ್ತಾನೆಯೇ ಹೊರತು ಸರ್ವಥಾ ಅನುಭವಿಸದೇ ಇದ್ದದ್ದು ಸ್ವಪ್ನದಲ್ಲಿ ತೋರುವದಿಲ್ಲ. ಹೀಗೆ ಸ್ವಪ್ನದಲ್ಲಿ ಜೀವನು ಏನೆಲ್ಲ ಪದಾರ್ಥಗಳನ್ನು ಅನುಭವಿಸುತ್ತಾನೆಯೋ ಇದನ್ನು ತೈಜಸ ನಾಮಕ ಪರಮಾತ್ಮನ ಪ್ರೇರಣೆಯಿಂದ ವಾಯುದೇವರು ನಮಗೆ ತೋರಿಸುತ್ತಾರೆ.

ಸುಷುಪ್ತಿಯಲ್ಲಿ ಮನಸ್ಸಿನ ಕಾರ್ಯವೂ ಸ್ಥಗಿತಗೊಳ್ಳುತ್ತದೆ. ಆಗ ಜೀವ ತೈಜಸನನ್ನು ಬಿಟ್ಟು ಪ್ರಾಜ್ಞನನ್ನು ಸೇರಿರುತ್ತಾನೆ. ಈ ಸುಷುಪ್ತ್ಯವಸ್ಥೆಯಲ್ಲಿ ಜೀವ ಸ್ವಾಪ್ನ ಪದಾರ್ಥಗಳನ್ನು ನೋಡಲಾರ. ಆಗ ಸಾತ್ತ್ವಿಕರು ಹಾಗು ರಾಜಸರು ಪರಮಾತ್ಮನ ಸಾಮರ್ಥ್ಯದಿಂದ ಉದ್ಭೂತವಾದ ಸ್ವರೂಪಸುಖವನ್ನನುಭವಿಸುತ್ತಾರೆ. ತಾಮಸರ ಸ್ವರೂಪದಲ್ಲಿ ಸುಖವಿಲ್ಲದ ಕಾರಣ ಅವರಿಗೆ ಪರಮಾತ್ಮ ತನ್ನ ಆಲಿಂಗನದಿಂದ ಸುಖವನ್ನು ಕೊಡುತ್ತಾನೆ. ಇದು ಭಗವಂತನ ದಯೆಗೆ ದ್ಯೋತಕವಾಗಿದೆ.

ಪಕ್ಷಿಗಳೆಲ್ಲ ತಾವು ವಾಸಿಸುವ ವೃಕ್ಷವನ್ನೇ ಆಶ್ರಯಿಸಿ ಇರುತ್ತವೆ. ಹಾಗೆ ಪಂಚ ಮಹಾ-ಭೂತಗಳು, ಪಂಚ ತನ್ಮಾತ್ರಾಗಳು, ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ತದ್ವಿಷಯಗಳು, ಪಂಚವಿಧವಾದ ಮನಸ್ಸು, ತದ್ವಿಷಯಗಳು ಹಾಗೂ ಎಲ್ಲವನ್ನು ಧಾರಣೆ ಮಾಡುವ ಮುಖ್ಯಪ್ರಾಣ ಹೀಗೆ ಸರ್ವಕ್ಕೂ ಪರಮಾತ್ಮನೇ ಸ್ವತಂತ್ರನಾಗಿ ಆಶ್ರಯನಾಗಿದ್ದಾನೆ.

ಸರ್ವಜ್ಞನಾದ ಪರಮಾತ್ಮ ಆಯಾ ದೇವತೆಗಳನ್ನು ಪ್ರೇರಿಸಿ ಸ್ವಯಂ ಅವರಲ್ಲಿ ಸನ್ನಿಹಿತನಾಗಿ ಚಕ್ಷುರಾದಿಗಳಿಗೆ ದರ್ಶನಾದಿಶಕ್ತಿಯನ್ನು ಕೊಡುತ್ತಾನೆ. ಪ್ರಾಕೃತರೂಪರಹಿತನಾದ ಅಪ್ರಾಕೃತಚಿನ್ಮಯಶರೀರನಾದ ಪರಮಾತ್ಮನನ್ನು ಅರಿತವನು ಸ್ವಯೋಗ್ಯವಾದ ಜ್ಞಾನದಿಂದ ಪೂರ್ಣನಾಗುತ್ತಾನೆ. ಅಲ್ಲದೆ ಪರಿಪೂರ್ಣನಾದ ಪರಮಾತ್ಮನನ್ನು ಸೇರಿ ಮೋಕ್ಷಸುಖ ವನ್ನನುಭವಿಸುತ್ತಾನೆ.

## ಪಂಚಮ ಪ್ರಶ್ನೆ

ನಂತರ ಶೈಬ್ಯ ಸತ್ಯಕಾಮ ಗುರುಗಳ ಸನಿಹ ಸೇರಿ ಕೇಳಿದ. ''ಭಗವನ್ ಮನುಷ್ಯ ದೇಹತ್ಯಾಗ ಮಾಡುವವರೆಗೂ ಪ್ರಣವಮಂತ್ರದಿಂದ ಪರಮಾತ್ಮನ ಉಪಾಸನೆಯನ್ನು ಮಾಡಬೇಕೆಂದು ಶಾಸ್ತ್ರಗಳೆಲ್ಲ ಸಾರುತ್ತವೆ. ಹಾಗೆ ಉಪಾಸನೆ ಮಾಡುವದರಿಂದ ಪುರುಷನಿಗಾಗುವ ಗತಿ ಏನು? ಎಂಬುದನ್ನು ತಿಳಿಸಿರಿ'' ಎಂದು.

ಹೀಗೆ ಕೇಳಿದ ಸತ್ಯಕಾಮನಿಗೆ ಪಿಪ್ಪಲಾದರು ಹೇಳಿದರು.

ಪ್ರಣವವು ಮುಖ್ಯವಾಗಿ ಪರಬ್ರಹ್ಮಪ್ರತಿಪಾದಕವಾಗಿದೆ. ಅಮುಖ್ಯವಾಗಿ ಚತುರ್ಮುಖ ನನ್ನೂ ತಿಳಿಸುತ್ತದೆ. ಇದಕ್ಕೆ ದೃಷ್ಟಾಂತ. ಗಂಗಾ ಶಬ್ದದ ಮುಖ್ಯಾರ್ಥ ಪ್ರವಾಹ. ಈ ಪ್ರವಾಹದ ವಿಶೇಷವಾದ ಸಂಬಂಧ ಇದ್ದುದರಿಂದ ತೀರವನ್ನೂ ಪ್ರವಾಹ ವಾಚಕವಾದ ಗಂಗಾಶಬ್ದದಿಂದ ವ್ಯವಹರಿಸುತ್ತಾರೆ. ಹಾಗೆ ಪ್ರಣವವಾಚ್ಯನಾದ ಪರಬ್ರಹ್ಮನ ಪರಿಪೂರ್ಣವಾದ ಸನ್ನಿಧಾನ ಚತುರ್ಮುಖನಲ್ಲಿ ಇದೆ. ಆದ್ದರಿಂದ ಪ್ರಣವವು ಚತುರ್ಮುಖನನ್ನೂ ಅಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆ. ಹೀಗೆ ಪ್ರಣವ ಮಂತ್ರದಿಂದ ವೈಕುಂಠಾದಿಲೋಕಗಳಲ್ಲಿರುವ ಪರಬ್ರಹ್ಮನನ್ನು, ಚತುರ್ಮುಖನಲ್ಲಿ ಅಧಿಷ್ಠಿತನಾದ ಅಪರಬ್ರಹ್ಮನನ್ನು ಉಪಾಸನೆ ಮಾಡಿದ ಪುರುಷ ಇವರಿಬ್ಬರಲ್ಲೊಬ್ಬರಾದ ಚತುರ್ಮುಖನನ್ನು ಮೊದಲು ಹೊಂದಿ ಅವನ ಉಪದೇಶದಿಂದ ಪರಬ್ರಹ್ಮನನ್ನು ಸೇರುತ್ತಾನೆ.

ಓಂಕಾರದಲ್ಲಿ ಮೂರಕ್ಷರಗಳಿವೆ. ವಿಶ್ವ, ತೈಜಸ, ಪ್ರಾಜ್ಞ ತ್ರ್ಯಕ್ಷರಪ್ರತಿಪಾದ್ಯವಾದ ರೂಪಗಳು. ಯಾವ ಸಾಧಕನು ಈ ಮೂರು ಅಕ್ಷರಗಳಲ್ಲಿಯ ಯಾವದೋ ಒಂದು ಅಕ್ಷರದಿಂದ ಪ್ರತಿಪಾದ್ಯನಾದ ಭಗವಂತನ ರೂಪವನ್ನು ಚೆನ್ನಾಗಿ ತಿಳಿದು ಉಪಾಸನೆ ಮಾಡು ವನೋ ಅವನು ಸ್ವರ್ಗದಲ್ಲಿ ವಿಶಿಷ್ಟವಾದ ಸುಖವನ್ನು ಅನುಭವಿಸುತ್ತಾನೆ. ಋಗ್ವೇದಾ ಭಿಮಾನಿದೇವತೆಗಳ ಪ್ರಸಾದದಿಂದ ಮತ್ತೆ ಭೂಲೋಕದಲ್ಲಿ ಬ್ರಾಹ್ಮಣನಾಗಿ ಜನಿಸುತ್ತಾನೆ. ಹೇರಳವಾದ ವೈಭವದಿಂದ ಯುಕ್ತನಾಗುತ್ತಾನೆ. ಅಲ್ಲದೆ ಆಸ್ತಿಕ್ಯಬುದ್ಧಿಯುಕ್ತನಾಗಿ ಬ್ರಹ್ಮಚರ್ಯವನ್ನು ವಿಶೇಷವಾಗಿ ಪಾಲಿಸುತ್ತಾ ಎಲ್ಲ ಇಂದ್ರಿಯಗಳನ್ನು ನಿಗ್ರಹಿಸಿ ಪರಮಾತ್ಮನಲ್ಲಿ ತಲ್ಲೀನನಾಗುತ್ತಾನೆ.

ಯಾವದೇ ಎರಡು ಅಕ್ಷರಗಳಿಂದ ಪ್ರತಿಪಾದ್ಯವಾದ ಪರಮಾತ್ಮನ ರೂಪವನ್ನು ಚೆನ್ನಾಗಿ ತಿಳಿದು ಉಪಾಸನೆ ಮಾಡಿದ ಪುರುಷರು ಅಂತರಿಕ್ಷಲೋಕದಿಂದ ಚಂದ್ರಲೋಕಕ್ಕೆ ಹೋಗಿ ಸ್ವಸ್ವಯೋಗ್ಯವೈಭವವನ್ನನುಭವಿಸಿ ಮತ್ತೆ ಭೂಲೋಕ ಸೇರುತ್ತಾರೆ. ಇಲ್ಲಿಯೂ ಸುಖ ವನ್ನನುಭವಿಸುತ್ತಾ ವಿಶಿಷ್ಟವಾದ ಸಾಧನೆಯನ್ನು ಮಾಡುತ್ತಾರೆ. ಇದೆಲ್ಲವು ಯಜುರಭಿ ಮಾನಿಗಳಾದ ದೇವತೆಗಳಿಂದಲೇ ಸಾಧ್ಯವಾಗುತ್ತದೆ.

ಓಂಕಾರದಲ್ಲಿಯ ಮೂರೂ ಅಕ್ಷರದಿಂದ ಪ್ರತಿಪಾದ್ಯವಾದ ಪರಮಾತ್ಮನ ರೂಪಗಳನ್ನರಿತು ಉಪಾಸನೆ ಮಾಡಿದವರಿಗೆ ಅಪರೋಕ್ಷವು ಸಿದ್ಧಿಸುತ್ತದೆ. ಇವರನ್ನು ಸಾಮಾಭಿಮಾನಿಗಳಾದ ದೇವತೆಗಳು ಸೂರ್ಯಲೋಕಕ್ಕೆ ಕರೆದೊಯ್ಯುತ್ತಾರೆ. ಸರ್ಪವು ಪೊರೆಯನ್ನು ತ್ಯಜಿಸಿ ನವಚೈತನ್ಯವನ್ನು ಪಡೆದಂತೆ ಜ್ಞಾನಿಗಳು ಲಿಂಗದೇಹದಿಂದ ನಿರ್ಮುಕ್ತರಾಗಿ ಶುದ್ಧರಾಗಿ ಪರಬ್ರಹ್ಮನನ್ನು ಪಡೆಯುತ್ತಾರೆ. ಇದು ವಾಯುದೇವರ ಅನುಗ್ರಹದಿಂದಲೇ ಸಾಧ್ಯವಾಗುತ್ತದೆ. ಈ ವಿಷಯವನ್ನು ಪ್ರತಿಪಾದಿಸುವ ಪ್ರಮಾಣಗಳು ಸಾಕಷ್ಟಿವೆಯಾದ್ದರಿಂದ ಈ ತತ್ತ್ವದಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ.

## ಷಷ್ಠ ಪ್ರಶ್ನೆ

ಕೊನೆಯದಾಗಿ ಸುಕೇಶಾ ಭಾರದ್ವಾಜರು ಗುರುಗಳನ್ನು ಸಮೀಪಿಸಿ ಪ್ರಶ್ನೆಗಳನ್ನು ಕೇಳುತ್ತಾರೆ. ಭಗವನ್ ಕೋಸಲ ದೇಶದ ಹಿರಣ್ಯನಾಭ ನನ್ನ ಬಳಿ ಬಂದು ಷೋಡಶಕಲನಾದ ಪುರುಷನ ಬಗೆಗೆ ಕೇಳಿದ. ಅವನಿಗೆ ನಾನು ಹೀಗೆ ಹೇಳಿದೆ.''ಯೋಗ್ಯನಾದ ತತ್ತ್ವಜಿಜ್ಞಾಸು ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳುವದು ತಿಳಿದವರ ಕರ್ತವ್ಯ. ವಿಷಯ ತಿಳಿದೂ ಗೊತ್ತಿಲ್ಲವೆಂದು ಹೇಳಿದರೆ ಅದು ಅಸತ್ಯವಾಗುತ್ತದೆ. ತನ್ನ ಪ್ರತಿಷ್ಠೆಯನ್ನು ಕಾಪಾಡಿಕೊಳ್ಳಲು ತಿಳಿಯದ ವಿಷಯವನ್ನೂ ತನಗೆ ತೋಚಿದಂತೆ ಹೇಳುವದು ಇನ್ನಿಷ್ಟು ಅಸತ್ಯ. ಮೂಲವಿಲ್ಲದಾಗ ವೃಕ್ಷ ಒಣಗಿದಂತೆ ಅಸತ್ಯಮಾತನಾಡಿದವನ ಪುಣ್ಯವೆಲ್ಲವೂ ಹ್ರಾಸವಾಗುತ್ತದೆ. ಆದ್ದರಿಂದ ನಿಜವಾಗಿಯೂ ನನಗೆ ಈ ವಿಷಯ ಗೊತ್ತಿಲ್ಲ'' ಎಂದು ಹೇಳಿ ಕಳಿಸಿದೆ.

ಆ ಪ್ರಶ್ನೆಗಳನ್ನೆ ನಿಮಗೀಗ ಕೇಳುತ್ತೇನೆ. ಷೋಡಶಕಲೆಗಳುಳ್ಳ ಪುರುಷನೊಬ್ಬನಿದ್ದಾನೆಂದು ಹೇಳುತ್ತಾರೆ. ಅವನು ಯಾರು? ಎಲ್ಲಿರುವ? ಆ ಷೋಡಶಕಲೆಗಳಾವು? ಷೋಡಶ ಕಲೆಗಳು ಅವನಿಗೆ ಬಂದದ್ದು ಹೇಗೆ? ಇದನ್ನು ತಿಳಿಸಿರಿ.

ಪಿಪ್ಪಲಾದರು ಭಾರದ್ವಾಜನಿಗೆ ಉತ್ತರ ನೀಡಿದರು. ಹೇ ಭಾರದ್ವಾಜ ಯಜ್ಞ ಯಾಗಾದಿಗಳನ್ನು ವಿಧ್ಯುಕ್ತವಾಗಿ ಆಚರಿಸಿ ದೇವತೆಗಳಿಗೆ ಸಮರ್ಪಿಸಿದ ನಂತರ ಉಳಿದ ಸೋಮರಸವನ್ನು ಕುಡಿಯುವ ಮಹಾಧಾರ್ಮಿಕ ನೀನು. ನಿನಗೆ ಉತ್ತರ ಹೇಳುತ್ತೇನೆ ಕೇಳು.

### ಷೋಡಶಕಲ ಪುರುಷ ಅವನ ಸ್ಥಾನ

ಷೋಡಶ ಕಲೆಗಳುಳ್ಳ ಪುರುಷ ಎಲ್ಲೋ ಇಲ್ಲ. ನಮ್ಮ ಶರೀರದಲ್ಲೇ ಇದ್ದಾನೆ. ಅವನಿಗೆ ಕಲೆಗಳಿಲ್ಲ. ಅವನಿಂದ ಕಲೆಗಳ, ಕಲಾಭಿಮಾನಿಗಳಾದ ದೇವತೆಗಳ ಜನ್ಮವಾಗಿದೆ. ಅಲ್ಲದೇ ಕೊನೆಗೆ ದೇವತೆಗಳೆಲ್ಲ ಅವನಲ್ಲಿಯೆ ಲಯವನ್ನು ಹೊಂದುತ್ತಾರೆ. ಆದ್ದರಿಂದ ಅವನನ್ನು ಷೋಡಶಕಲ ಎನ್ನುತ್ತಾರೆ.

### ಷೋಡಶ ಕಲೆಗಳು ಅವುಗಳ ಉತ್ಪತ್ತಿ

ಇಂತಹ ಪುರುಷ ಸೃಷ್ಟಿಯ ಆದಿಯಲ್ಲಿ ವಿಚಾರಮಾಡಿದ. ''ಯಾರು ಉತ್ಕ್ರಾಂತರಾದರೆ ನಾನು ಉತ್ಕ್ರಾಂತನಾಗಬೇಕೊ ಯಾರು ಪ್ರತಿಷ್ಠಿತನಾದರೆ ನಾನು ಪ್ರತಿಷ್ಠಿತನಾಗಬೇಕೊ ಅಂತಹಾ ಉತ್ತಮನಾದ ವ್ಯಕ್ತಿಯನ್ನು ಸೃಷ್ಟಿಮಾಡಬೇಕು'' ಎಂದು. 1. ಹೀಗೆ ವಿಚಾರಿಸಿ ಪರಿಶುದ್ಧಧರ್ಮರತರಾದ ಮುಖ್ಯಪ್ರಾಣನನ್ನು ಸೃಜಿಸಿದ. ಇದು ಮೊದಲನೆಯ ಕಲಾ. ಜೀವ ಎಂಬ ಕಲಾಕ್ಕೆ ನಿಯಾಮಕರಿವರು. ಕಲಾ ಎಂದರೆ ''ಭಾಗ'' ಎಂದು ಅರ್ಥ. ಅಭಿಮಾನಿಗಳನ್ನು ''ಉಪಕಾರಕರು'' ಎಂಬ ಅರ್ಥದಲ್ಲಿ ಕಲಾ ಎಂದು ವ್ಯವಹರಿಸುತ್ತಾರೆ. 2. ಆ ವಾಯುದೇವರು

ಶ್ರದ್ಧಾಭಿಮಾನಿನಿಯಾದ ಸರಸ್ವತೀದೇವಿಯನ್ನು ಸೃಷ್ಟಿಮಾಡಿದರು. ಇವಳು ದ್ವಿತೀಯಕಲಾ. ಆಸ್ತಿಕ್ಯಬುದ್ಧಿಗೆ ನಿಯಾಮಕಳಿವಳು. 3. ಸರಸ್ವತಿಯಿಂದ ಮನಸ್ಸಿಗೆ ಅಭಿಮಾನಿಗಳಾದ ಗರುಡ, ಶೇಷ, ರುದ್ರರು ಜನಿಸಿದ್ದಾರೆ. ಈ ಮನಸ್ಸಿಗೆ ಕಾಮ ಹಾಗು ಅನಿರುದ್ಧರು ಕೂಡಾ ಅಭಿಮಾನಿಗಳಾಗಿದ್ದಾರೆ. 4. ರುದ್ರದೇವರಿಂದ ಇಂದ್ರಿಯಾಭಿಮಾನಿಗಳಾದ ಇಂದ್ರದೇವರು 5. ಇವರಿಂದ ಅನ್ನಾಭಿಮಾನಿಯಾದ ಸೋಮ 6. ಸೋಮನಿಂದ ವೀರ್ಯಾಭಿಮಾನಿಯಾದ ವರುಣ 7. ವರುಣನಿಂದ ತಪಸ್ಸಿಗೆ ಅಭಿಮಾನಿಯಾದ ಅಗ್ನಿ 8. ಅಗ್ನಿಯಿಂದ ಆಕಾಶಾಭಿಮಾನಿಯಾದ ವಿಘ್ನೇಶ 9. ಇವನಿಂದ ಭೂತವಾಯುವಿಗೆ ಅಭಿಮಾನಿಯಾದ ಪ್ರವಹಪುತ್ರನಾದ ಮರುತ್ 10. ಇವನಿಂದ ತೇಜಸ್ಸಿಗೆ ಅಭಿಮಾನಿಯಾದ ಅಗ್ನಿಯ ಮೊದಲನೆಯ ಮಗನಾದ ಪಾವಕ 11. ಪಾವಕನಿಂದ ಗೋಲಕಾಭಿಮಾನಿಯಾದ ಪರ್ಜನ್ಯ 12. ಪರ್ಜನ್ಯನಿಂದ ಮಂತ್ರಾಭಿಮಾನಿನಿಯಾದ ಸ್ವಾಹಾ 13. ಇವಳಿಂದ ಜಲಾಭಿಮಾನಿಯಾದ ಬುಧ 14. ಬುಧನಿಂದ ನಾಮಾಭಿಮಾನಿನಿಯಾದ ಉಷಾ 15. ಇವಳಿಂದ ಪೃಥಿವಿಗೆ ಅಭಿಮಾನಿಯಾದ ಶನಿ 16. ಶನಿಯಿಂದ ಕರ್ಮಕ್ಕೆ ಅಭಿಮಾನಿಯಾದ ಪುಷ್ಕರ ಹೀಗೆ ಕ್ರಮವಾಗಿ ಹುಟ್ಟಿದ್ದಾರೆ. ಈ ತಾರತಮ್ಯ ಕ್ರಮ ಮುಕ್ತಿಯಲ್ಲಿಯೂ ಇದೇ ರೀತಿಯಾಗಿ ಇರುತ್ತದೆ. ಹುಟ್ಟಿದ ಇವರೆಲ್ಲರೂ ಪ್ರಾಣನಿಗೆ ಅಧೀನರಾಗಿರುತ್ತಾರೆ. ಪ್ರಾಣನಿಗೆ ಪರಮಾತ್ಮ ಆಶ್ರಯನಾಗಿದ್ದಾನೆ. ಆ ಪರಮಾತ್ಮನಿಗೆ ಆಶ್ರಯವಾಗುವವರು ಯಾರೂ ಇಲ್ಲ.

ನದಿಗಳು ನಾಮರೂಪಗಳನ್ನು ಪರಿತ್ಯಾಗಮಾಡಿ ಸಮುದ್ರದಲ್ಲಿ ಒಂದಾಗುತ್ತವೆ. ಹಾಗೆ ಈ ದೇವತೆಗಳೆಲ್ಲ ಪರಮಾತ್ಮನಲ್ಲಿ ಒಂದಾಗುತ್ತಾರೆ. ಎಂದರೇ ನದಿಗಳೆಲ್ಲ ಸಮುದ್ರ ಸೇರಿದ ಮೇಲೆ ಅಜ್ಞರಿಗೆ ಆ ನದಿಗಳ ನಾಮರೂಪಗಳನ್ನು ಇದು ಗಂಗಾ, ಇದು ಗೋದಾ, ಇದು ಕಾವೇರೀ ಎಂಬುದಾಗಿ ವಿವೇಕ ಮಾಡಿ ತಿಳಿಯಲಾಗುವದಿಲ್ಲ, ಆದರೆ ವಾಯುದೇವರು ಇದೆಲ್ಲವನ್ನು ತಿಳಿದಿದ್ದಾರೆ. ಹಾಗೆ ಮುಕ್ತರಾದವರ ನಾಮರೂಪಗಳನ್ನು ಅಜ್ಞಜನರಿಗೆ ತಿಳಿಯಲಾಗುವದಿಲ್ಲ. ಇಷ್ಟೆಹೊರತು ಆ ನಾಮರೂಪಗಳಿಗೆ ನಾಶವಿಲ್ಲ. ಹೀಗೆಂದು "ಅನಂತಂ ವೈ ನಾಮ ಅನಂತಂ ವೈ ವಿಶ್ವೇದೇವಾಃ" ಎಂಬ ಶ್ರುತಿಯು ಪ್ರತಿಪಾದಿಸುವದರಿಂದ ಮುಕ್ತರ ನಾಮರೂಪಗಳು ಜ್ಞಾನಿಮಾತ್ರ ಗೋಚರವೆಂದು ಹೇಳಲೇಬೇಕು.

ರಥಚಕ್ರದ ಮಧ್ಯಭಾಗವನ್ನು ಅಲಗುಗಳು ಆಶ್ರಯಿಸಿಕೊಂಡಿರುತ್ತವೆ. ಮಧ್ಯಾ-ವಯವವಿಲ್ಲದೆ ಅವುಗಳಿಗೆ ಅಸ್ತಿತ್ವವಿಲ್ಲ. ಹಾಗೆ ಮುಖ್ಯಪ್ರಾಣ ಮೊದಲಾದ ಈ ಎಲ್ಲ ದೇವತೆಗಳು ಪರಮಾತ್ಮನನ್ನಾಶ್ರಯಿಸಿವೆ. ಪರಮಾತ್ಮನಿಲ್ಲದೇ ದೇವತೆಗಳಿಗೆ ನಿಲುವಿಲ್ಲ. ಇಂತಹಾ ಪರಮಾತ್ಮನನ್ನರಿಯುವುದರಿಂದ ಸಂಸಾರ ದೂರವಾಗುತ್ತದೆ.

ಇಷ್ಟೆಲ್ಲ ಉಪದೇಶಿಸಿದ ಪಿಪ್ಪಲಾದರು ಕೊನೆಗೆ "ನಾನು ತಿಳಿದದ್ದು ಇಷ್ಟೇ. ಇದಕ್ಕಿಂತಲೂ ಹೆಚ್ಚಿನದು ನನಗೆ ಗೊತ್ತಿಲ್ಲ". ಎಂದು ಶಿಷ್ಯರಿಗೆ ಹೇಳಿದರು. ಆಗ ಶಿಷ್ಯರೆಲ್ಲ ಗುರುಗಳಿಗೆ

ನಮಸ್ಕಾರಾದಿಗಳಿಂದ ಸತ್ಕರಿಸಿದರು. ಅಲ್ಲದೇ ಸಂಸಾರವನ್ನು ಪರಿಹರಿಸುವ ಪರಬ್ರಹ್ಮನನ್ನು-ಪದೇಶಿಸಿದ ನೀವೇ ನಿಜವಾಗಿ ನಮ್ಮ ತಂದೆ. ನಮ್ಮನ್ನು ನಿಜವಾಗಿ ರಕ್ಷಿಸಿದವರೆಂದು ಕೊಂಡಾಡಿ ತಮ್ಮ ತಮ್ಮ ಸ್ಥಾನಗಳನ್ನು ಸೇರಿಕೊಂಡರು. ಇಂತಹಾ ಪಿಪ್ಪಲಾದರೇ ಮೊದಲಾದ ಮಹಾ ಋಷಿಗಳಿಗೆ ಶ್ರದ್ಧಾಭಕ್ತಿಪೂರ್ವಕವಾದ ಶಿರಸಾಷ್ಟಾಂಗ ಪ್ರಣಾಮಗಳು.

ನಮೋ ನಮೋಽಸ್ತು ಹರಯೇ ಪ್ರೇಷ್ಠಪ್ರೇಷ್ಠತಮಾಯ ಮೇ ।
ಪರಮಾನಂದಸಂದೋಹಸಾಂದ್ರಾನಂದವಪುಷ್ಮತೇ ॥

ಅಸ್ಮದ್ಗುರ್ವಂತರ್ಗತ ಪಿಪ್ಪಲಾದಿಋಷ್ಯಂತರ್ಗತ ತಾತ್ತ್ವಿಕದೇವತಾಂತರ್ಗತ
ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು.

ಇತಿ
ಶ್ರೀಶಶರಣಚರಣರೇಣು
ವಾದಿರಾಜ ಕರಣಮ್

# विषयानुक्रमणिका

## प्रथमः प्रश्नः



## द्वितीयः प्रश्नः



## तृतीयः प्रश्नः

## चतुर्थः प्रश्नः



## पञ्चमः प्रश्नः



## षष्ठः प्रश्नः

श्रीमदानन्दतीर्थभगवत्पादाचार्यविरचितं

# षट्प्रश्नोपनिषद्भाष्यम्

**नमो भगवते तस्मै प्राणादिप्रभविष्णवे।**
**अमन्दानन्दसान्द्राय वासुदेवाय वेधसे॥ १ ॥**

**श्रीमज्जयतीर्थभिक्षुविरचिता षट्प्रश्नभाष्यटीका**

पान्तु नः पद्मनाभस्य श्रीपदाम्बुजरेणवः।
कमलाकबरीभारसुरभीकरणोद्यताः॥

इह खलु संसारपारावरे निपतितमधिकारिजनं जननी तनयमिव परमात्मतत्त्वज्ञानप्लवेनोद्दिधीर्षुरियमाथर्वणी ब्राह्मणोपनिषदितिकर्तव्यतामन्तरेण न तत्त्वज्ञानकरणतामापद्यते। अतः तदितिकर्तव्यतारूपन्यायगर्भं भाष्यं करिष्यन्नाचार्यः प्रारिप्सितपरिसमाप्त्यादिप्रयोजनामेतदुपनिषत्प्रतिपाद्यदेवताप्रणतिमादौ निबध्नाति– **नम इति**॥ नानिर्धारितस्वरूपस्य प्रणामो युक्तः। नचान्तरेण लक्षणं वस्तुनिर्धारणमित्यतो वासुदेवस्य लक्षणमाह– **प्राणादीति**॥ वक्ष्यते हि 'स मिथुनमुत्पादयते रयिञ्च प्राणञ्च' इत्यादिना। नच प्राणादिजननेनास्य किमपि प्रयोजनं शङ्कनीयम्, पूर्णानन्दत्वादित्याह– **अमन्देति**॥ एतच्च 'यत्तच्छान्तमजरम्' इत्यादिना। नचैवं प्रवृत्त्यनुपपत्तिः। तत्स्वाभाव्यादितीष्णुच्प्रत्ययेनोक्तम्। एतदपि 'उत्पादयते' इति वर्तमानापदेशेन। प्राणादिप्रभविष्णुना सर्वज्ञेन भवितव्यम्। एतदप्यस्यास्तीत्याह– **वेधस इति**॥ इदमपि 'एष हि द्रष्टा' इत्यादिना। अत्र च भगवान् वासुदेव एवोपनिषत्प्रतिपाद्यः, प्राणादयस्तु तच्छेषतयेति सूचितम्। अमन्दानन्दसान्द्रताकथनेन परमानन्दाविर्भावलक्षणमुपनिषदुत्पादितज्ञानफलञ्च। 'तं यथा यथोपासते तदेव भवति' इत्यादिश्रुतेः। वक्ष्यति च 'तेषामसौ विरजो ब्रह्मलोकः' इति। अतो युक्तमेव विषयप्रयोजनवदेतदुपनिषदो व्याख्यानमिति।

**श्रीवामनपण्डिताचार्यविरचिता षट्प्रश्नभाष्यटीका**

नमो भगवते प्राणवागादिप्रभविष्णवे।
पूर्णानन्दात्मदेहाय वासुदेवाय सश्रिये॥
नमोऽस्तु वेदवेदान्तगुरवे सर्ववेदिने।
वासुदेवाय दिव्याय मध्वनाथाय चानिशम्॥
सत्तत्त्वदीपिकाचार्यान् वन्देऽहं परमान्गुरून्।
नारायणार्यांश्च गुरून् वन्दे सर्वांश्च सज्जनान्॥
षट्प्रश्नोपनिषद्भाष्यं व्याख्यास्यामः स्वशक्तितः॥
श्रीमध्वमाधवप्रीत्यै तदनुग्रहशक्तितः।

अथ श्रीमदानन्दतीर्थभगवानेतद्भाष्यमारभमाणः 'नमो भगवते तस्मै' इत्यादि श्लोकेनेष्टदेवतायै वासुदेवाय नमस्करोति। मङ्गलाचरणाद्यर्थम् । 'प्राणादिप्रभविष्णवे' इत्यादीनां वासुदेवात्मकब्रह्मविशेषणानां 'सुकेशा च' इत्याद्युपनिषदभिप्रेतार्थग्राहकत्वात् तद्भाष्यमिहारभ्यत इति वस्तुनिर्देशोऽप्यर्थतः कृतः स्यात्। 'आत्मत एष प्राणो जायते' इत्यादावभिप्रेतं हि प्राणादिप्रभविष्णुत्वम्। एवमन्यच्च द्रष्टव्यम्। अत्रैवाधिकार्यादयश्च सूचिता भवन्ति। तथाहि– नमस्कर्ताधिकारी नम्यो विषयः। प्राणशब्देन प्रकृष्टानन्दलक्षणस्य मोक्षस्याभिप्रेतत्वात् तत्प्रभविष्णुरिति प्रयोजनं च सूचितम्। अथ शास्त्रविषयस्य जिज्ञास्यत्वात् तदधिकारिणो जिज्ञासकत्वाच्च जिज्ञास्यजिज्ञासकभावः सम्बन्धो दर्शितः। यत्सम्बन्धात्सुप्तमुक्तयोः सुखं सुश्रुतं सूत्रितं च स ह्यमन्दानन्दसान्द्रः। सर्वजगतो धारणादिकमपि विधत्त इति वेधा उक्तः।

**श्रीवादिराजतीर्थविरचिता षट्प्रश्नभाष्यटीकाप्रकाशिका**

सर्पतल्पमनल्पेन्द्रकल्पं नत्वा हयाननम् ।
षट्प्रश्नोपनिषट्टीकाटिप्पणी क्रियते मया॥

'प्राणादिप्रभविष्णवे' इत्यत्रान्तर्णीतो णिच्। प्राणादीन् प्रकर्षेण भावयितुमुत्पादयितुं शीलमस्यास्तीति स तथोक्त इत्यर्थः। 'एतदपि' इत्यत्र एतत्

स्वभावादेव प्राणाद्युत्पादकत्वमुपनिषदि 'मिथुनमुत्पादयते' इति वर्तमानापदेशेन सूचितमित्यर्थः। अतीतसृष्टेर्वर्तमानत्वोक्तौ स्रष्टृत्वशक्तेः सर्वदा वर्तमानत्वस्य सूचितत्वात् स्वाभाविकी शक्तिरिति लभ्यत इति भावः। जातवेदा इत्यादौ छन्दसि वेदःशब्दस्यापि श्रुतत्वात् 'तृतीयोऽतिशये' इति वचनाच्चातिशयेन वेदा वेधा इति व्युत्पत्त्या वेधसे सर्वज्ञायेत्यर्थः। एतदेवाभिप्रेत्याऽह टीकाकारः– **एतदप्यस्यास्तीति**॥

## श्रीसत्यप्रज्ञतीर्थविरचिता षट्प्रश्नभाष्यटीकाटिप्पणी

॥ **कमलाकबरीभार इति** ॥ कमलायाः कबरीलक्षणो भारः केशपाश इत्यर्थः । तेन भारशब्दस्यैव केशपाशवाचित्वेन कबरीशब्दो व्यर्थ इति शङ्कानवकाश इति ज्ञेयम् । अत एव चमरीणां वालभाराः केशसमूहाः इति व्याख्यातं चित्रभट्टेन । सामान्यविशेषभावेनावैय्यर्थ्यात् ॥ **इष्णुच्-प्रत्ययेनोक्तमिति** ॥ 'आक्वेस्तच्छीलतद्धर्मतत्साधुकारिषु' इत्यधिकृत्य 'भुवश्च' इत्यनेन सूत्रेण ताच्छील्यार्थभूधातोः इष्णुच्प्रत्यये सति निष्पन्नस्य 'प्रभविष्णव' इत्यस्य तत्स्वाभाव्यार्थत्वमुक्तमित्यर्थः । प्राणादिप्रभविष्णुत्वे उपनिषज्ज्ञापकमाह– **उत्पादयत इति** ॥ **वर्तमानापदेशेनेति** ॥ परमेश्वरस्येदानीं प्राणादिजनकत्वाभावेन वर्तमानार्थेन लटा तत्स्वाभाव्यस्य वर्तमानत्वमुच्यत इत्यर्थः ॥

## श्रीश्रीनिवासतीर्थविरचिता षट्प्रश्नभाष्यटीकाटिप्पणी

यादवार्यगुरून्नत्वा तदुपादिष्टमार्गतः।
षट्प्रश्नोपनिषद्भाष्यटीका विव्रियते मया ॥

इह खलु जयतीर्थश्रीचरणाः सुरवरावतारपूर्णप्रज्ञविरचिषट्प्रश्नोपनिषद्भाष्यव्याख्यानाविघ्नपरिसमाप्त्यर्थं रेणुस्तुतिव्याजेन भगवन्तं प्रार्थयते– **जयन्तीति**॥ अत्र रेणूनां जडत्वेऽपि तत्र भगवद्रूपसद्भावस्य 'समूळ्हमस्य पांसुरे' इत्यादिश्रुतिसिद्धत्वात् कमलाकबरीभारसुरभीकरणोद्यतत्वं युक्तमिति सम्प्रदायविदः। अस्य जगत्पतेः पदे इदं विश्वं समूळ्हं प्रतिष्ठितम्। पदे इत्यनुक्त्वा पांसुरे इत्युक्त्या पांसुवदत्यन्तसम्बद्धत्वं द्योतितम्।

रमन्ति पांसवो यत्र पांसुरं पदमीरितम् ।
समूळ्हं तत्र विश्वं हि पांसुवज्जगतीपते:' इति भाष्यात् ।

पांसवः तदभिमानिनो रमन्त्यत्रेति॥ **इष्णुजिति** ॥ 'आक्वेस्तच्छील-तद्धर्मतत्साधुकारिषु' इति क्विप्प्रत्ययपर्यन्तं ये प्रत्ययाः विहितास्ते सर्वे तच्छीलाद्यर्थे भवन्तीत्युक्त्वा 'भुवश्च' इति सूत्रेण भूधातोः इष्णुच्प्रत्ययः स्यात्तच्छीलार्थ इत्युक्तत्वादत्र चोपपदाद्भूधातोरिष्णुच्प्रत्यये चकारलोपे 'सार्वधातुकार्धधातुकयोः' इत्युकारस्योकाररूपे गुणे तस्यापवादे प्रभव् इष्णु प्रभविष्ण्विति रूपम् ॥ **वर्तमानेति** ॥ उत्पादयत इति वर्तमानार्थकलट्प्रयोगः कृतः। नहीदानीमेवोत्पादयति भगवानत उत्पादकत्वं नामोत्पादनशक्तिः। सा च स्वभावभूता सर्वदास्तीति लभ्यते। लट्च क्रियाप्रबन्धमात्रे इति उत्पादयत इति वर्तमानव्यपदेशेनोक्तमित्यर्थः।। १-१ ॥

## छलारीनारायणाचार्यविरचितं षट्प्रश्नटीकाविवरणम्

नारायणं नमस्कृत्य पूर्णबोधादिसद्गुरून् ।
षट्प्रश्नोपनिषद्भाष्यटीकाव्याख्यां करोम्यहम् ॥ १ ॥

श्रीमज्जयार्यचरणः षट्प्रश्ननामकाथर्वणब्राह्मणमध्यस्थोपनिषद्भाष्यं व्याख्यासुरादौ मङ्गलमाचरति– **पान्तु न इति** ॥ पद्मं नाभौ यस्य। पद्ममिव नाभिर्यस्येति वा पद्मनाभः। 'नाभेर्नभश्च' इत्यन्तर्गणसूत्रेण नाभिशब्दस्य नभादेशः॥ श्रीपदाम्बुजरेणवः श्रीपदशब्दस्य पद्मनाभशब्दसापेक्षत्वेऽपि नासामर्थ्यं शङ्कनीयम्। अस्माकं गुरुकुलमित्यादिवत्। नित्यसापेक्षस्य सामर्थ्याङ्गीकारात्। कमलायाः लक्ष्म्याः कबर्याः केशग्रन्थेः, भारत्वं नाम बहुकेशत्वम्। रेणूनां केशभारसुरभीकरणं तु पादयोः सुगन्धत्वेनाम्बुजसाम्योक्त्या। वस्तुतः 'सद्देहः सुखगन्धश्च' इति सुगन्धशरीरावयवत्वात्तत्सम्बद्धरेणूनामपि सुरभित्वमिति ज्ञेयम् ॥ **संसारपारावर इति** ॥ संसारसमुद्र इत्यर्थः। 'समुद्रोऽब्धिरकूपारः पारावारः सरित्पतिः' इति अमरोक्तेः॥ **इतिकर्तव्यतेत्यादीति** ॥ ब्रह्मशब्दः भावप्रधानः। 'ब्रह्माणि जीवाः सर्वेऽपि' इत्युक्तेः ब्रह्मशब्दस्य जीववाचकत्वात्। ब्रह्मत्वस्य जीवत्वस्य

